Reg. No. M. 3...
ಪ್ರತಿ ಶುಕ್ರ... ...ಡುತ್ತದೆ




ವಾರ್ಷಿಕ ಚಂದಾ : ರೂ. ೧-೮-೦
ಅಂಚೆ ಮೂಲಕ : ರೂ. ೨-೪-೦
ಬಿಡಿ ಪತ್ರಿಕೆ : ೬ ಕಾಸು



ಸಂಪುಟ ೨
ಸಂಚಿಕೆ ೬

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಬೆಂಗಳೂರು, ಶುಕ್ರವಾರ, ಡಿಸೆಂಬರ್ ೧, ೧೯೩೯

ಸಂಪಾದಕ:
ಬಿ. ವೆಂಕೋಬರಾವ್, ಬಿ.ಎ.

ಕನ್ನಡನುಡಿ ಭಕ್ತರು-೧೮

## ಶ್ರೀ|| ಗಳಗನಾಥ-ವೆಂಕಟೇಶ ತಿರಕೊ ಕುಲಕರ್ಣಿ ಅವರು

ಲೇಖಕ: ಶ್ರೀ. ದ. ಕೃ. ಭಾರದ್ವಾಜ

ನಾನು ಸುಮಾರು ೧೬-೧೭ ವರುಷದವನಾಗಿದ್ದೆ. ಸನ್ ೧೯೦೮ ನೆಯ ಸಾಲು. ಆಗ ಉತ್ತರ ಕರ್ನಾಟಕದ ಮೈಸೂರು ರೆವಿನ್ಯೂ ಸರ್ವೇ ಇಲಾಖೆಗೆ ನೌಕರಗಾಗಿ ಬಂದು ಸೇರಿದ್ದವರಿಗೆಲ್ಲ ಇನ್ನೂ "ಬಾಂದಿನವರು" ಎಂಬ ಹೆಸರಿತ್ತು. ಬಸವನಗುಡಿಯ ಈಗ 'ಆನೆಯ ಕ್ರಾಸ್' ಆಗಿರುವ 'ಸರ್ವೆಯರ್ಸ್ ಸ್ಟ್ರೀಟ್' ಆಗ "ಬಾಂದಿನವರ ಬೀದಿ" ಎಂದು ಪ್ರಸಿದ್ಧವಾಗಿತ್ತು. ಅದರಂತೆಯೆ ಈಗ 'ರೆವೆನ್ಯೂ ಸರ್ವೆ ಆಫಿಸಸ್' ಎಂದು ಪ್ರಸಿದ್ಧವಾಗಿರುವ ಕಟ್ಟಡಕ್ಕೆ ಆಗ 'ಸೊಟ್ಟರುಮಾಲಿನ ಬಾಂದಿನವರ ಕಚೇರಿ' ಎಂಬ ಹೆಸರೆ ಪ್ರಸಿದ್ಧವಾಗಿತ್ತು. ಈಗ 'ಕನ್ನಡನುಡಿ'ಯ ಸಂಪಾದಕರಾಗಿರುವ ಶ್ರೀ|| ಬಂಕಾಪುರದ ವೆಂಕೋಬರಾಯರೂ ಬಾಂದಿನವರೇ ಆಗಿದ್ದರು. ಬಾಂದಿನವರೆಂಬುದು ಜಾತಿ ವಾಚಕವಲ್ಲ. ಮೈಸೂರಿನವರು ಧಾರ್ವಾಡದವರಿಗಿಟ್ಟ ದೇಶ ವಾಚಕವದು. ಆ ಸಮಯದಲ್ಲಿ ಆಗಡಿಯ ಆನಂದವನದಲ್ಲಿ ಶ್ರೀ. ಶೇಷಾಚಲ ಸದ್ಗುರು ಮಹಾರಾಜರ ಸಂಸ್ಥೆಯ ಅಂಗವಾಗಿ 'ಸದ್ಬೋಧಚಂದ್ರಿಕೆ' ಎಂಬ ಮಾಸಪತ್ರಿಕೆಯು ಹೊರಟಿರುವುದೆಂದೂ ಅದಕ್ಕೆ ಚಂದಾದಾರರಾದವರಿಗೆ ಗುರುಸೇವೆ ಪುಣ್ಯ ಲಭಿಸುವುದೆಂದ ಪ್ರಚಾರಕರು ಬಂದಿದ್ದರು. ಅವರಿಗೆ ನಮ್ಮ ತಂದೆಯವರು "ನೀವು ನಾಳೆ ಸಂಬಳದ ದಿನ ನಮ್ಮ ಕಚೇರಿಗೆ ಬಂದರೆ ನಾನು ಒಂದೇ ದಿನ ನಿಮಗೆ ನಮ್ಮ ಖಾತೆಯವರನ್ನೆಲ್ಲ ಚಂದಾದಾರರಾಗಿ ಮಾಡಿ ಕೊಡುತ್ತೇನೆ" ಎಂದರು. ಮಾರನೆಯ ದಿನ ಮನೆಗೆ 'ಸದ್ಬೋಧ ಚಂದ್ರಿಕೆ'ಯ ಸಂಚಿಕೆಯೂ ಬಂದಿತು; ಅದಕ್ಕೆ ಸುಮಾರು ೪೦೦ ಜನ ಹೊಸ ಚಂದಾದಾರರು ಸಿಕ್ಕಿದರೆಂಬ ಸಂತೋಷದ ಸುದ್ದಿಯೂ ತಿಳಿಯಿತು. ಇದುವರೆಗೆ ಸಾವಿರಗಟ್ಟಲೆ ಚಂದಾದಾರರಿರುವ ಗೌರವವು ಯಾವುದಾದರೂ ಕನ್ನಡ ಮಾಸಪತ್ರಿಕೆಗೆ ಸಲ್ಲುವುದಿದ್ದರೆ ಅದು ಆಗಿನ 'ಸದ್ಬೋಧ ಚಂದ್ರಿಕೆ'ಗೆ ಸರಿ! (ಈಗಿನ ಚಂದ್ರಿಕೆಯು ಚಂದಾದಾರ ಸಂಖ್ಯೆಯನ್ನರಿಯೆ.) ಆಗ ಅದರ ಚಂದಾದಾರರ ಸಂಖ್ಯೆಯು ೬,೦೦೦ ಆಗಿತ್ತು! ಆ ಸದ್ಬೋಧ ಚಂದ್ರಿಕೆಯ ಮೂಲಕ ಕನ್ನಡಿಗರೆದುರಿಗೆ ಬಂದು ನಿಂತ, ಆಗಿನ ಧಾರವಾಡದ ಟ್ರೇನಿಂಗ್ ಕಾಲೇಜಿನ ಅಸಿಸ್ಟೆಂಟ್ ಮಾಸ್ತರ ಶ್ರೀ|| ವೆಂಕಟೇಶ ತಿರಕೊ ಕುಲಕರ್ಣಿ ಗಳಗನಾಥರ ಹೆಸರನ್ನು ಇಂದು ಕನ್ನಡನಾಡಿನಲ್ಲಿ ಅರಿಯದವರಿಲ್ಲವೆಂದರೆ ಅತ್ಯುಕ್ತಿಯಾಗದು.



ಆಗಿನ ಸಮಯದಲ್ಲಿ ಉತ್ತರ ಕರ್ನಾಟಕದಲ್ಲಿ ಸುಶಿಕ್ಷಿತರೆನಿಸಿದವರೆಲ್ಲ ಕೇವಲ ಮರಾಠಿ ನಾವೆಲುಗಳು, ಕಾದಂಬರಿಗಳು, ಕಥೆಗಳನ್ನೋದುವುದೇ ಹೆಮ್ಮೆಯ ವಿಚಾರವಾಗಿತ್ತು. ಮೈಸೂರು ಪ್ರಾಂತ್ಯದಲ್ಲಿ ಕನ್ನಡ ಮಾತನಾಡುವಾಗ ಇಂಗ್ಲೀಷ ಪದಗಳನ್ನು ಸೇರಿಸಿ ಮಾತನಾಡುವುದು ಗೌರವಾಸ್ಪದವಾಗಿದ್ದಂತೆ ಉತ್ತರ ಕರ್ನಾಟಕದಲ್ಲಿ ಮಧ್ಯೆ ಮಧ್ಯೆ ಮರಾಠಿ ವಾಕ್ಯಗಳನ್ನು ಸೇರಿಸಿ ಮಾತನಾಡುವುದೂ ಹೆಮ್ಮೆಯ ವಿಚಾರವೆಂದು ಅನೇಕರು ತಿಳಿದಿದ್ದರು. ಆರ್ಯ ಸಮಾಜದ ಮಿತ್ರರೊಬ್ಬರು "ಉತ್ತರ ಭಾರತದಲ್ಲಿ ಆರ್ಯಸಮಾಜ ನಿರ್ಮಾಣವಾಗದಿದ್ದರೆ ಹಿಂದುಗಳನ್ನು ಕಾಣುವುದೇ ಅಪರೂಪವಾಗುತ್ತಿತ್ತು"ಎಂದು ಹೇಳುತ್ತಿದ್ದರು. ಹಾಗೆಯೆ ಉತ್ತರ ಕರ್ನಾಟಕದಲ್ಲಿ ಆಗಡಿ ಆನಂದವನದ ಶ್ರೀ॥ ಶೇಷಾಚಲ ಸದ್ಗುರುಗಳ ಸದ್ಬೋಧ ಚಂದ್ರಿಕೆಯೂ, ಶ್ರೀ॥ ಗಳಗನಾಥರೂ ಇಲ್ಲದಿದ್ದರೆ ಕನ್ನಡಕ್ಕೆ, ಕನ್ನಡಿಗರಿಗೆ ಈಗಿನ ಹುರುಪು ಬರುತ್ತಿತ್ತೊ ಇಲ್ಲವೊ! ಆಗಿನ ಹೀನಸ್ಥಿತಿಯನ್ನು ಕೆಲಮಟ್ಟಿಗಾದರೂ ಹೋಗಲಾಡಿಸುವ ಉದ್ದೇಶದಿಂದ ಶ್ರೀ॥ ಗಳಗನಾಥರು 'ಸದ್ಬೋಧ ಚಂದ್ರಿಕೆ' ಎಂಬ ಮಾಸಪತ್ರಿಕೆಯ ಮುಖಾಂತರ ಹತ್ತು ವರುಷಗಳಲ್ಲಿ ಹನ್ನೆರಡು ಕಾದಂಬರಿಗಳನ್ನೂ, ಬೇರೆ ಪ್ರಬಂಧಗಳನ್ನೂ ಲೇಖನಗಳನ್ನೂ ಬರೆದು ಚಂದ್ರಿಕೆಗೆ ಏಳುಸಾವಿರದ ವರೆಗೆ ಚಂದಾದಾರರನ್ನು ಸಂಪಾದಿಸಿಕೊಂಡು, ಉತ್ತರ ಕರ್ನಾಟಕದ ಸಾಮಾನ್ಯ ಜನತೆಯಲ್ಲಿ ವಾಚನಾಭಿರುಚಿಯನ್ನು ಹುಟ್ಟಿಸಿದ ಶ್ರೇಯಸ್ಸು ಶ್ರೀ॥ ಗಳಗನಾಥರವರಿಗೆ ಸಲ್ಲತಕ್ಕುದಾಗಿದೆ. ಕಾರಣಾಂತರದಿಂದ ಅವರು ಸದ್ಬೋಧ ಚಂದ್ರಿಕೆಯನ್ನು ಬಿಟ್ಟು ಹಾವೇರಿಯಲ್ಲಿ ಬಂದು ನೆಲಸಿ, ಅಲ್ಲಿ ವೈದಿಕ ಪಾಠಶಾಲೆಯನ್ನು ಸ್ಥಾಪಿಸಿ, "ಸದ್ಗುರು" ಎಂಬ ಮಾಸಪತ್ರಿಕೆಯನ್ನು ಹೊರಡಿಸಿದರು. ಆಗಲೆ ಅವರು ತಮ್ಮದೇ ಆದ 'ಶ್ರೀ ವೆಂಕಟೇಶ ಪ್ರಿಟಿಂಗ್ ಪ್ರೆಸ್, ಹಾವೇರಿ' ಮುದ್ರಣಾಲಯವನ್ನು ಸ್ಥಾಪಿಸಿದರು. ಆದರೆ ತಮ್ಮ ಪಾಠಶಾಲೆಗಾಗಿ ಸಹಾಯಸಂಪತ್ತಿಗಳನ್ನು ಸಂಗ್ರಹಿಸುವುದಕ್ಕಾಗಿ ಆಗಾಗ್ಗೆ ಅವರು ಹೊರಗೆ ಹೋಗಬೇಕಾಗಿ ಬಂದದ್ದರಿಂದಲೋ ಏನೋ, ಇವರ ಪತ್ರಿಕೆಯನ್ನು ನಿಲ್ಲಿಸಬೇಕಾಯಿತು. ಆದರೆ ಅದನ್ನ … ಮಾರ್ಪಡಿಸಿದರು. ಈಗ ಆ ಮಾಲೆಯ ಪುಸ್ತಕಗಳೇ ಶ್ರೀ ಗಳಗನಾಥರ ಲೇಖನಿಯಿಂದ ಹೊರಬೀಳುತ್ತಿವೆ. ಕನ್ನಡ ಕಾದಂಬರಿ ಲೇಖಕರಲ್ಲಿ ಗ್ರಂಥ ಪ್ರಮಾಣದಿಂದ ದಿವಂಗತ ಶ್ರೀ॥ ಬಿ. ವೆಂಕಟಾಚಾರ್ಯರು ಮತ್ತು ಶ್ರೀ॥ ಗಳಗನಾಥ ಇವರನ್ನು ಸರಿಗಟ್ಟುವವರಾರೂ ಇನ್ನೂ ಹುಟ್ಟಿಲ್ಲ! ಶ್ರೀ॥ ವೆಂಕಟಾಚಾರ್ಯರು ಬಂಗಾಳಿ ಸಾಹಿತ್ಯ ರತ್ನಗಳನ್ನು ಕನ್ನಡ ಸರಸ್ವತಿಗರ್ಪಿಸಿದ್ದರೆ, ಶ್ರೀ॥ ಗಳಗನಾಥರು ಮರಾಠಿ ಸಾಹಿತ್ಯ ರತ್ನಗಳನ್ನು ಅರ್ಪಿಸಿದರು. ಗಳಗನಾಥರು ಮೊದಮೊದಲಿನಲ್ಲಿ ಮರಾಠಿಯ ಸುಪ್ರಸಿದ್ಧ ಕಾದಂಬರಿಕಾರರಾದ ಹರಿನಾರಾಯಣಆಪ್ಟೆಯವರ ಗ್ರಂಥಗಳನ್ನು ಅನುವಾದಿಸುತ್ತಿದ್ದರು. ಅನಂತರ ಅವರು ಇನ್ನು ಬೇರೆ ಸುಪ್ರಸಿದ್ಧ ಮರಾಠಿ ಗ್ರಂಥಕಾರರ ಗ್ರಂಥಗಳನ್ನವಲಂಬಿಸಿ 'ಛತ್ರಸಾರ' 'ರಾಣಾ ರಾಜಸಿಂಹ' ಮೊದಲಾದ ಗ್ರಂಥಗಳನ್ನು ಬರೆದರು. ಅಷ್ಟು ಮಾತ್ರವಲ್ಲದೆ ಅವರು ಸ್ವತಂತ್ರವಾಗಿ 'ಮಾಧವ ಕರುಣಾ ವಿಲಾಸ, ಕುಮುದಿನಿ, ಕನ್ನಡಿಗರ ಕರ್ಮಕಥೆ'ಗಳನ್ನು ರಚಿಸಿ, ಕನ್ನಡಿಗರನ್ನು ತಮಗೆ ಋಣಿಗಳಾಗಿ ಮಾಡಿಕೊಂಡಿರುವರು. ನಾನು ರಂಗಭೂಮಿ ಸಂಪಾದಕನಾಗಿದ್ದಾಗ ಒಮ್ಮೆ ಇವರು ನಮ್ಮ ಮನೆಗೆ ಬಂದು 'ನಿಮಗೆ........ವರು ಸ್ನೇಹಿತರಂತೆ, ನನಗೆ ಗ್ರಂಥ ಪ್ರಕಟನೆ ಮತ್ತು ಪಾಠಶಾಲೆಯ ದೆಸೆಯಿಂದ ಸಾಲವಾಗಿದೆ. ಈಗ ನನ್ನ ಹತ್ತಿರ ........ಪುಸ್ತಕದ ಪ್ರತಿಗಳು ಉಳಿದಿವೆ. ಅದನ್ನು ಪಠ್ಯ ಪುಸ್ತಕವಾಗಿಟ್ಟರೆ ಬಹಳ ಸಹಾಯವಾಗುವುದು' ಎಂದರು. ಆ ಸ್ನೇಹಿತರು ದೊಡ್ಡ ಅಧಿಕಾರಿಗಳೂ, ಸರಳ ಹೃದಯರೂ ಆಗಿರುವರು. ಅವರಿಗೆ ನನ್ನ ಪುಸ್ತಕಗಳನ್ನೊಮ್ಮೆ ಅರ್ಪಿಸಿದಾಗ, ನನಗೆ ಅವುಗಳ ಬೆಲೆ ಕೊಡುವುದಕ್ಕೆ ಬಂದರು. ಆಗ ನಾನು "ಅವುಗಳನ್ನು ಪ್ರೇಮದ ಕಾಣಿಕೆಯಾಗರ್ಪಿಸಿದೆನೆ ಹೊರತು, ಮಾರಲು ನಾನು ಬರಲಿಲ್ಲ" ಎಂದೆನು. ಅವರು "ನಾನು ಯಾವ ರೀತಿಯಾಗಿ ನಿಮಗೆ ಸಹಾಯ ಮಾಡಲಿ?" ಎಂದರು. ನಾನು "ನನಗೆ ಸಹಾಯ ಬೇಕಾದಾಗ ಬಂದು ಕೇಳುವೆ." ಎಂದಿದ್ದೆನು. ಅದರ ನೆನಪಾಗಿ ಈಗ ನಾನು ಶ್ರೀ॥ ಗಳಗನಾಥರನ್ನು ಕರೆದುಕೊಂಡುಹೋಗಿ ಸಹಾಯವನ್ನು ಕೇಳಿ… ಹೊರಟೆನು. ಆ ಮಿತ್ರರೂ ಮನೆಯಲ್ಲಿದ್ದರು. ಅವರಿಗೆ … ಗಳಗನಾಥರ ಪರಿಚಯಮಾಡಿಸಿ 'ನನಗೆ ಸಹಾಯ ಮಾಡುವುದಾಗಿ ಹೇಳಿದ್ದಿರಿ, ಪಠ್ಯಪುಸ್ತಕವಾಗುವುದಕ್ಕಾಗಿ ನಾನು ಯಾವುದನ್ನೂ ಬರೆದಿಲ್ಲ. ಈಗ ಇವರಿಗೆ ಆ ಸಹಾಯ ಮಾಡಿದರೆ ನನಗೆ ಸಹಾಯವಾಯಿತೆಂದು ಭಾವಿಸುವೆನು' ಎಂದು ಗಳಗನಾಥರ ಪರವಾಗಿ ಮಾತನಾಡಿದೆನು. ಅವರ ಕಾರ್ಯಕ್ಕೂ ಯಶಸ್ಸು ದೊರೆಯಿತು. ಆಗ ಗಳಗನಾಥರು ಬೆಂಗಳೂರಿನಲ್ಲಿ ಚಾಂದಿನವರ ಬೀದಿಯಲ್ಲಿಯೆ ೫-೬ ತಿಂಗಳು ಇದ್ದು ೩-೪ ಕಾದಂಬರಿಗಳನ್ನು ಬರೆದರು. ಮೈಸೂರು ಬೆಂಗಳೂರು ಕರ್ನಾಟಕ ಸಂಘಗಳವರೂ ಶ್ರೀ॥ ಗಳಗನಾಥರಿಗೆ ಕಾಣಿಕೆ ಮಾನಪತ್ರಿಕೆಗಳನ್ನರ್ಪಿಸಿ ಅವರಿಗೆ ಸಲ್ಲಬೇಕಾಗಿರುವ ಗೌರವವನ್ನು ಸಲ್ಲಿಸಿರುವರು. ಈಗ ೭೦ ವರುಷ ವಯಸ್ಸಾಗಿದ್ದರೂ ಕನ್ನಡ ಗ್ರಂಥಲೇಖನದಲ್ಲಿ ಅವರಿಗಿರುವ ಹುರುಪು ಎಂಥವರನ್ನೂ ನಾಚಿಸುವಂತಹುದಾಗಿದೆ. ಶ್ರೀ॥ ಗಳಗನಾಥರ ಪ್ರಕಟಣೆಗಳ ವಿಚಾರದಲ್ಲಿ ಮತ್ತೊಂದು ವೈಶಿಷ್ಟ್ಯವಿದೆ. ಕನ್ನಡ ಗ್ರಂಥಕಾರರು ಒಂದೊಂದು ಮುದ್ರಣಕ್ಕೆ ತಮ್ಮ ಗ್ರಂಥಗಳು–ಪಠ್ಯಪುಸ್ತಕವಾಗಿರದಿದ್ದರೆ–ಒಂದೊಂದೇ ಸಾವಿರವನ್ನು ಅಚ್ಚುಹಾಕಿಸುವರು. ಆದರೆ ಗಳಗನಾಥರ ಗ್ರಂಥಗಳಾವುವೂ ಒಂದೊಂದು ಮುದ್ರಣಕ್ಕೆ ೫೦೦೦ಕ್ಕೆ ಕಡಿಮೆಯಾಗಿ ಅಚ್ಚಾದಂತೆ ಕಂಡುಬರುವುದಿಲ್ಲ!! ಇದರಿಂದ ಅವರ ಪುಸ್ತಕಗಳಿಗಿರುವ ಲೋಕಪ್ರಿಯತೆಯು ವ್ಯಕ್ತವಾಗುವುದು. ಶ್ರೀ॥ ಗಳಗನಾಥರ ಗ್ರಂಥಗಳನ್ನು (೧) **ಕನ್ನಡಿಗರ ಐತಿಹಾಸಿಕ ಕಾದಂಬರಿಗಳು, (೨) ಮರಾಠಿಗರ ಐತಿಹಾಸಿಕ ಕಾದಂಬರಿಗಳು, (೩) ರಜಪೂತರ ಐತಿಹಾಸಿಕ ಕಾದಂಬರಿಗಳು, (೪) ಇತರ ಐತಿಹಾಸಿಕ ಕಾದಂಬರಿಗಳು, (೫) ಸಾಮಾಜಿಕ ಕಾದಂಬರಿಗಳು (೬) ಪೌರಾಣಿಕ ಗ್ರಂಥಗಳು (೭) ಚರಿತ್ರ ಗ್ರಂಥಗಳು** ಎಂದು ವಿಭಾಗಿಸಬಹುದಾಗಿದೆ: ಮತ್ತೆ ಅವುಗಳ ಹೆಸರನ್ನೂ ಅನುಕ್ರಮವಾಗಿ ಹೀಗೆ ಹೇಳಬಹುದಾಗಿದೆ: (೧) ಮಾಧವ ಕರುಣ ವಿಲಾಸ; (೨) ಕುಮುದಿನಿ; (೩) ಕನ್ನಡಿಗರ ಕರ್ಮಕಥೆ; (೪) ಊರ್ಣನೀಸೂತ್ರ; (೫) ಕಮಲ ಕುಮಾರಿ, (೬) ಕರ್ಮಫಲ (೭) ಛತ್ರಪತಿ; (೮) ಶಿವಪ್ರಭುವಿನ ಪುಣ್ಯ; (೯) ಕುರುಕ್ಷೇತ್ರ; (೧೦) ಮರಾಠರ ಅಭ್ಯುದಯ; (೧೧) ತಿಲೋತ್ತಮೆ; (೧೨) ಕ್ಷಾತ್ರತೇಜ; (೧೩) ಪ್ರಬುದ್ಧ ಪದ್ಮನಯನೆ; (೧೪) ರಾಣಿ ಮೃಣಾಲಿನಿ; (೧೫) ರಾಣಾರಾಜಸಿಂಹ; (೧೬) ಛತ್ರಸಾರ; (೧೭) ಕುಟುಂಬ; (೧೮) ಧರ್ಮರಹಸ್ಯ; (೧೯) ಸತ್ವಸಾರ; (೨೦) ಸಂಸಾರ ಸುಖ; (೨೧) ಲಕ್ಷ್ಮೀಬಾಯಿ; (೨೨) ಗುರುಪ್ರಸಾದ; (೨೩) ಭಾಗವತಾಮೃತ (೨೪) ಶೈವ ಸುಧಾರ್ಣವ; (೨೫) ತುಳಸಿದಾಸ ರಾಮಾಯಣಾಮೃತ; (೨೬) ವೆಂಕಟೇಶ ಮಹಾತ್ಮ್ಯ—ಶ್ರೀನಿವಾಸ ನರಸಿಂಹ ಕಾಟೋಟಿ, ಸ್ಕೂಲ್ ಮಾಸ್ತರು ಇವರೊಂದಿಗೆ ಸಹಕರಿಸಿ ಬರೆದುದು; (೨೭) ಶುಕಸಂಜೀವನಿ; (೨೮) ಭಾರತಾಮೃತ-ಆದಿಪರ್ವ; (೨೯) ಆನಂದ ರಾಮಾಯಣ; (೩೦) ಶ್ರೀ ಚಿದಂಬರ ಚರಿತ್ರೆ; (೩೧) ನಿರ್ಯಾಣಮಹೋತ್ಸವ; (೩೨) ಶ್ರೀ ಶೇಷಾಚಲ ಸದ್ಗುರು ನಿರ್ಯಾಣಮಹೋತ್ಸವ; (೩೩) ಭಗವತೀ ಕಾತ್ಯಾಯನಿ; (೩೪) ಸದ್ಗುರು ಪ್ರಭಾವ; (೩೫) ಧಾರ್ಮಿಕತೇಜ- ಇವಿಷ್ಟು ನನಗೆ ಪರಿಚಯವಿರುವ ಗ್ರಂಥಗಳ ವಿಚಾರವಾಯಿತು. ಈಚೆಗೆ ಇನ್ನೂ ೪-೫ ಗ್ರಂಥಗಳು ಪ್ರಕಟವಾಗಿದ್ದರೂ ಆಗಿರಬಹುದು. ಶ್ರೀ॥ ಗಳಗನಾಥರು ಹದಿನಾರಾಣೆ ಸನಾತನಿಗಳೂ ಕರ್ಮನಿಷ್ಠರೂ ಆಗಿರುವರು. ಅವರು ಲೇಖನದ ಕಲೆಯಲ್ಲಿ ಮಾತ್ರವಲ್ಲದೆ ಭಗವದ್ಗೀತಾದಿ ಧಾರ್ಮಿಕ ಉಪನ್ಯಾಸ ಮಾಡುವುದರಲ್ಲಿಯೂ ತಮ್ಮ ಅಚಲಶ್ರದ್ಧೆಯನ್ನು ವ್ಯಕ್ತಪಡಿಸಿರುವರು. ಅವರು ಕನ್ನಡ ನುಡಿಗೆ ಮಾಡಿರುವ ಸೇವೆಯು ಅತ್ಯಮೂಲ್ಯವಾದುದು. ಈ ಇಳಿವಯಸ್ಸಿನಲ್ಲಿಯೂ ಕನ್ನಡ ನುಡಿಗಾಗಿ ದುಡಿಯುವ ಅವರ ಹುರುಪು ಹುಮ್ಮಸುಗಳು ಪ್ರತಿಯೊಬ್ಬ ಕನ್ನಡ ಲೇಖಕನನ್ನು ಉತ್ಸಾಹಗೊಳಿಸಲಿ! ಭುವನೇಶ್ವರಿ ಮಾತೆಯು ಶ್ರೀ॥ ಗಳಗನಾಥರಿಗೆ ಆಯುರಾರೋಗ್ಯ ಸಂಪದಗಳನ್ನಿತ್ತು ಅವರಿಂದ ಇನ್ನೂ ನಾಡನುಡಿಯ ಸೇವೆಯಾಗುವಂತೆ ಮಾಡಲಿ! — ಎಂಬುದೆ ಹಾರೈಕೆ.

---

# ದರ್ಶನಗಳು

[ಶ್ರೀ: ವಿ. ಟಿ. ತಿರುನಾರಾಯಣ ಐಯ್ಯಂಗಾರ್, ಎಂ. ಎ.]

(೨ನೆಯ ಪುಟದಿಂದ ಮುಂದುವರಿದುದು)

ಈ ಮತದಲ್ಲಿ ಪ್ರತ್ಯಕ್ಷವೊಂದೇ ಪ್ರಮಾಣ. ಕಣ್ಣಿಗೆ ರೂಪ, ಮೂಗಿಗೆ ವಾಸನೆ, ನಾಲಗೆಗೆ ರುಚಿ, ಚರ್ಮಕ್ಕೆ ಸ್ಪರ್ಶ, ಕಿವಿಗೆ ಶಬ್ದ, ಮನಸ್ಸಿಗೆ ಸುಖ, ದುಃಖ ಮುಂತಾದುವುಗಳು ಮಾತ್ರ ಗೋಚರವಾಗುತ್ತವೆ. ಇತರರು ಒಪ್ಪುವ ಅನುಮಾನವನ್ನು ಪ್ರಮಾಣವೆಂದು ಅಂಗೀಕರಿಸಲಾಗುವುದಿಲ್ಲ. ಏಕೆಂದರೆ ಅದರಲ್ಲಿ ಮುಖ್ಯವಾಗಿ ಇರಬೇಕಾದ ವ್ಯಾಪ್ತಿಜ್ಞಾನವನ್ನು ಸ್ಥಿರಪಡಿಸುವುದು ಅಸಾಧ್ಯ. ಉದಾಹರಣೆಗಾಗಿ: ನಾವು ಎಲ್ಲೋ ಸಂಚರಿಸುತ್ತಿರುವಾಗ, ದೂರದಲ್ಲಿ ಬೆಟ್ಟದ ಮೇಲೆ ಹೊಗೆಯನ್ನು ನೋಡುತ್ತೇವೆ. ಹೊಗೆಯು ನಮ್ಮ ಕಣ್ಣಿಗೆಕಾಣುವುದರಿಂದ ಅದು ನಮಗೆ ಪ್ರತ್ಯಕ್ಷವಾಯಿತು. ತತ್ಕ್ಷಣವೇ ಹೊಗೆ ಕಾಣುವ ಬೆಟ್ಟದಲ್ಲಿ ಬೆಂಕಿ ಇದೆ ಎಂದು ನಿಶ್ಚಯಿಸುತ್ತೇವೆ. ಬೆಂಕಿ ನಮಗೆ ಕಾಣದೆ ಪರೋಕ್ಷವಾಗಿದೆ. ಹೊಗೆ ಮಾತ್ರ ಪ್ರತ್ಯಕ್ಷವಾಗಿ ಕಾಣುತ್ತದೆ. ಆದರೂ ಬೆಂಕಿ ಇದೆ ಎಂದು ಪರೋಕ್ಷವಾದ ಅರ್ಥವನ್ನು ಸಾಧಿಸುತ್ತೇವೆ. ಇದಕ್ಕೆ ಅನುಕೂಲವಾದ ಪ್ರಮಾಣವೇ ಅನುಮಾನ. ಬೆಂಕಿಗೂ ಹೊಗೆಗೂ ಒಂದು ಸಹಜವಾದ ಸಂಬಂಧವಿದೆ. ಬೆಂಕಿಯಿಲ್ಲದ ಕಡೆ ಹೊಗೆಯಿರಲಾರದು. ಹೊಗೆಯಿದ್ದ ಕಡೆ ಬೆಂಕಿ ಇದ್ದೇ ಇರಬೇಕು. ಈ ಸಂಬಂಧಕ್ಕೆ ವ್ಯಾಪ್ತಿ ಎಂದು ಹೆಸರು. ವ್ಯಾಪ್ತಿಜ್ಞಾನವೇ ಅನುಮಾನದ ಮುಖ್ಯವಾದ ಆಧಾರ. ವ್ಯಾಪ್ತಿಜ್ಞಾನವಿಲ್ಲದವನಿಗೆ ಅನುಮಾನ ಪ್ರಮಾಣದಿಂದ ಯಾವ ಪ್ರಯೋಜನವೂ ಇಲ್ಲ; ಜ್ಞಾನಮಾರ್ಗದಲ್ಲಿ ಒಂದು ಹೆಜ್ಜೆಯನ್ನು ಕೂಡ ಅವನು ಮುಂದಿಡಲಾಗುವುದಿಲ್ಲ.

ಚಾರ್ವಾಕ ಪದ್ಧತಿಯ ಪ್ರಕಾರ ವ್ಯಾಪ್ತಿಜ್ಞಾನವು ಏರ್ಪಡುವುದು ಅಸಂಭವ. ಬೆಂಕಿಗೂ ಹೊಗೆಗೂ ಇರುವ ವ್ಯಾಪ್ತಿಯು ಸ್ಥಿರಪಡಬೇಕಾದರೆ ಎಲ್ಲೆಲ್ಲಿ ಹೊಗೆಯು ಕಂಡಬರುತ್ತದೆಯೋ ಅಲ್ಲೆಲ್ಲಾ ಬೆಂಕಿಯು ಇದ್ದೇ ತೀರಬೇಕು ಎಂದು ನಾವು ಮನಗಂಡಿರಬೇಕು. ಅದು ಅಸಾಧ್ಯ. ಹೊಗೆ ಇರುವ ಸ್ಥಳಗಳನ್ನೆಲ್ಲ ನಾವು ನೋಡುವುದಕ್ಕಾಗ್ಯವುದಿಲ್ಲ. ಈಗ ಹೊಗೆ ಇರುವ ಕಡೆ ಬೆಂಕಿ ಇದೆ, ಆದರೆ ಹಿಂದೆಯೂ ಹಾಗೆಯೇ ಇತ್ತು ಮುಂದೆಯೂ ಹಾಗೆಯೇ ಇರುವುದೆಂದು ಹೇಗೆ ಹೇಳುವುದು? ಹೊಗೆ ಕೆಲವು ಪ್ರದೇಶಗಳಲ್ಲಿರಬಹುದು. ಮತ್ತು ಭವಿಷ್ಯತ್ಕಾಲದಲ್ಲಿ ಹೊಗೆಗೂ ಬೆಂಕಿಗೂ ಯಾವ ಸಂಬಂಧವಿರುತ್ತದೆಯೋ, ಹೇಳಲಾಗುವುದಿಲ್ಲ. ಸ್ವಲ್ಪ ಸಂದೇಹ ತೋರಿದರೂ ನಿಶ್ಚಯಜ್ಞಾನವು ಸಡಿಲವಾಗುತ್ತದೆ. ಆದ್ದರಿಂದ ವಾಪ್ತಿ ಜ್ಞಾನದಲ್ಲಿ ಸಂದೇಹ ತೋರಿಬರುವುದಾದ್ದರಿಂದ, ವ್ಯಾಪ್ತಿನಿಶ್ಚಯಕ್ಕೆ ಬದಲಾಗಿ ವ್ಯಾಪ್ತಿಸಂಶಯ ಏರ್ಪಟ್ಟು, ಅನುಮಾನದಿಂದ ನಮಗಾಗಬೇಕಾದ ಉಪಯೋಗವು ನಿಂತುಹೋಗುತ್ತದೆ. ಅನೇಕ ಸ್ಥಳಗಳಲ್ಲಿ ಹೊಗೆಯು ಬೆಂಕಿಯ ಜೊತೆಯಲ್ಲಿರುವುದನ್ನು ಕಂಡು ಅವುಗಳಿಗೆ ಪರಸ್ಪರ ಸಂಬಂಧವಿದೆಯೆಂದು ನಾವು ಊಹಿಸುತ್ತೇವೆ. ಅಷ್ಟೆ. ನಮ್ಮ ಊಹೆ ನಿಜವಾದರೂ ಆಗಬಹುದು, ಅಥವಾ ಸುಳ್ಳಾದರೂ ಆಗಬಹುದು.

ಅನುಮಾನದಂತೆ ಶಬ್ದವನ್ನೂ ಪ್ರಮಾಣವೆಂದು ನಂಬಲಾಗುವುದಿಲ್ಲ. ಯಾರಾದರೂ ಮಾತಾಡುತ್ತಿದ್ದರೆ ನಮ್ಮ ಕಿವಿಗೆ ಕೆಲವು ಶಬ್ದಗಳು ಕೇಳಿಸುತ್ತವೆ. ಅದು ಶಬ್ದಪ್ರತ್ಯಕ್ಷ, ಶಬ್ದ ಪ್ರಮಾಣವಲ್ಲ. ಶಬ್ದಗಳು ಕೇಳಿದ ಅನಂತರ ಪದಗಳು ಗೊತ್ತಾಗುತ್ತವೆ. ಈ ಪದಜ್ಞಾನವೇ ಶಬ್ದಪ್ರಮಾಣ. ಪದಗಳನ್ನು ತಿಳಿದುಕೊಂಡಮೇಲೆ ಅವುಗಳ ಅರ್ಥ ಗೊತ್ತಾಗಿ ಅಂತ್ಯದಲ್ಲಿ ಪದಾರ್ಥಗಳು ಪರಸ್ಪರ ಸೇರಿಕೊಂಡಿರುವ ಬಗೆ ಗೊತ್ತಾಗುತ್ತದೆ. ಈ ಜ್ಞಾನವೇ ಶಬ್ದಪ್ರಮಾಣದಿಂದ ಉಂಟಾಗುವ ಶಾಬ್ದಬೋಧವೆಂಬ ಫಲ. ಶಾಬ್ದಬೋಧದಲ್ಲಿ ಅನುಮಾನ ಪ್ರಮಾಣವು ಹೆಚ್ಚು ಸಹಕರಿಸುವುದರಿಂದಲೂ, ಅನುಮಾನವನ್ನು ಪ್ರಮಾಣವೆಂದು ಒಪ್ಪದೆ ಇರುವುದರಿಂದಲೂ, ಶಬ್ದಪ್ರಮಾಣವನ್ನು ಅಂಗೀಕರಿಸುವುದು ಸಾಧ್ಯವಿಲ್ಲ. ಆದ್ದರಿಂದ ವೇದವನ್ನೂ ಸಹ ಪ್ರಮಾಣವಲ್ಲವೆಂದು ಹೇಳಬೇಕಾಯಿತು.

**ಪ್ರಮೇಯ ವಿಚಾರ:** ಪ್ರಮಾಣವಿಚಾರದಲ್ಲಿ ಚಾರ್ವಾಕನ ಮನೋವೃತ್ತಿಯನ್ನು ನೋಡಿದರೆ, ಪ್ರಪಂಚದಲ್ಲಿ ಯಾವುದೊಂದು ಕ್ರಮವೂ ಇರುವಂತೆ ತೋರುವುದಿಲ್ಲ. ಆದ್ದರಿಂದಲೇ ಮುಂದೆ ನಮಗೆ ಒಳ್ಳೆಯದೇ ಆಗುತ್ತದೆಯೋ ಅಥವಾ ಕೆಟ್ಟದ್ದೇ ಸಂಭವಿಸುವುದೋ ಎಂದು ನಿರ್ಧರಿಸುವದಕ್ಕೆ ಆಗುವದಿಲ್ಲ. ಆದುದರಿಂದ ನಾವಿರುವಾಗಲೇ ನಮಗೆ ಬೇಕಾದುದನ್ನು ಪಡೆಯಬೇಕು. ನಾಳೆ ಯಾರೋ ನಾವು ಯಾರೋ! ಈ ದೃಷ್ಟಿಗೆನುಗುಣವಾಗಿ ಚಾರ್ವಾಕನು ಪದಾರ್ಥಗಳನ್ನು ವಿಮರ್ಶೆಮಾಡಿದ್ದಾನೆ.

ನಾವು ಆತ್ಮನೆಂದೂ ಚೈತನ್ಯವೆಂದೂ ಹೇಳಿಕೊಳ್ಳುವ ಅಮೂಲ್ಯವಾದ ವಸ್ತು ಯಾವುದು? ಅದರ ಸ್ವರೂಪವೇನು? ಅದು ಎಲ್ಲಿ ಉತ್ಪತ್ತಿಯಾಗುತ್ತದೆ? ಎಂಬೀ ಪ್ರಶ್ನೆಗಳಿಗೆ ಉತ್ತರವು ಈ ರೀತಿಯಾಗಿರುತ್ತದೆ. ಭೂಮಿ, ನೀರು, ತೇಜಸ್ಸು ಮತ್ತು ಗಾಳಿ ಎಂಬ ನಾಲ್ಕು ಭೂತಗಳನ್ನು ಪ್ರತ್ಯಕ್ಷದ ಬಲದಿಂದ ಒಪ್ಪಬೇಕು. ಈ ನಾಲ್ಕು ಭೂತಗಳು ಕಲೆತರೆ ಅದಕ್ಕೆ ದೇಹವೆಂದು ಹೆಸರು. ದೇಹದಲ್ಲಿ ಚೈತನ್ಯವೆಂಬ ಒಂದು ಧರ್ಮ ಹುಟ್ಟುತ್ತದೆ. ಆ ಚೈತನ್ಯಕ್ಕೆ ಉಂಟಾಗುವ ಸುಖವೇ ಸ್ವರ್ಗ; ದುಃಖವೇ ನರಕ. ದೇಹಕ್ಕೆ ಆತ್ಮನೆಂದೂ ಹೆಸರು. ದೇಹದ ನಾಲ್ಕು ಭೂತಗಳು ಬೇರ್ಪಡುವಾಗ ಚೈತನ್ಯವು ನಾಶವಾಗುತ್ತದೆ. ಅದೇ ಮರಣ. ಪ್ರತ್ಯಕ್ಷಕ್ಕೆ ಗೋಚರವಾಗದೆ ಇರುವುದರಿಂದ ಆತ್ಮನ ನಿತ್ಯತ್ವ, ಪರಲೋಕ ಮುಂತಾದುವನ್ನು ಒಪ್ಪುವುದಕ್ಕಾಗುವುದಿಲ್ಲ. ಈ ರೀತಿ ನಾಲ್ಕು ಭೂತಗಳನ್ನು ಒಪ್ಪಿ, ದೇಹವೇ ಆತ್ಮಾ ಎಂದು ಭಾವಿಸಿ ಚೈತನ್ಯವನ್ನು ಧರ್ಮವೆಂದು ತಿಳಿದು ದೇಹಕ್ಕೆ ಅಧೀನವನ್ನಾಗಿಯೂ ಅನಿತ್ಯವನ್ನಾಗಿಯೂ ಭಾವಿಸಲಾಗಿದೆ.

**ಧರ್ಮ:** ವೇದಗಳ ಉಪದೇಶದಂತೆ ಆಚರಿಸುವ ಧರ್ಮಕ್ಕೆ ಈ ದರ್ಶನದಲ್ಲಿ ಅವಕಾಶವಿಲ್ಲ. ಆತ್ಮನ ಅನುಭವವೇ ಮೋಕ್ಷ ಎಂಬುದನ್ನು ಯಾರೂ ಒಪ್ಪದೆ ಇಲ್ಲ. ಆದರೆ ದೇಹವೇ ಆತ್ಮನಾದ್ದರಿಂದ ದೇಹದ ಸುಖವೇ ಮೋಕ್ಷ ಸುಖ; ದೇಹ ಪೋಷಣೆಯೇ ಧರ್ಮಾಚರಣೆ. ಒಬ್ಬರ ಸುಖ ಮತ್ತೊಬ್ಬರಿಗೆ ನಿಜವಾಗಿಯೂ ಗೊತ್ತಾಗುವುದಿಲ್ಲ. ನಮ್ಮ ಯೋಗಕ್ಷೇಮವನ್ನು ನಾವೇ ವಹಿಸಬೇಕು. ಕ್ರಮ ವ್ಯವಸ್ಥೆಯು ಪ್ರಪಂಚದಲ್ಲಿ ಸ್ಥಿರಪಡದೆ ಇರುವುದರಿಂದ ಎಲ್ಲ ವಿಧದಲ್ಲಿಯೂ ನಾವು ಸುಖಿಗಳಾಗಿರುವಂತೆ ನೋಡಿಕೊಳ್ಳಬೇಕು. ಮುಂದೆ ಸುಖವಾಗಿರುತ್ತೇವೆ ಎಂದು ಭಾವಿಸಿ ಈಗ ಕಷ್ಟವನ್ನು ಅನುಭವಿಸಲು ಒಪ್ಪಿದರೆ, ನಮ್ಮ ಪಾಲಿಗೆ ನರಕವೇ. ಆದ್ದರಿಂದ ಸರ್ವಥಾ ಸುಖವಾಗಿರುವುದನ್ನೇ ನೋಡಬೇಕು. ಮತ್ತು ಸುಖವೂ ದುಃಖವೂ ಒಟ್ಟಿಗಿರುತ್ತದೆ; ದುಃಖವನ್ನು ತಡೆಯುವುದು ಸಾಧ್ಯವಲ್ಲದ್ದರಿಂದ ಸುಖವೂ ಬೇಡ ಎಂದು ನಾವು ಸುಖ ಪಡುವ ಹಕ್ಕನ್ನು ಕಳೆದುಕೊಳ್ಳಬಾರದು. ಭತ್ತದ ಕಾಳಿನಲ್ಲಿ ಮುಳ್ಳು, ಹೊಟ್ಟು ಮುಂತಾದುವು ಇವೆಯೆಂದು ಅದರೊಳಗಿನ ಅಕ್ಕಿಯನ್ನು ಬಿಟ್ಟು ಬಿಡುವುದಿಲ್ಲ. ಇತರರಿಗೆ ದುಃಖವಾಗಬಹುದೆಂಬ ಕಾರಣದಿಂದಲೂ ನಾವು ಸುಖಪಡದೆ ಇರಬಾರದು. ನಮ್ಮ ಸುಖದುಃಖಗಳಿಗೆ ನಾವೇ ಬಾಧ್ಯರು. ಆದ್ದರಿಂದ ಬಾಳುವಷ್ಟು ದಿನವೂ ಸುಖವಾಗಿಯೇ ಬದುಕಬೇಕು. ಸಾಯದಿರುವುದು ಸಾಧ್ಯವಿಲ್ಲ; ಸತ್ತವರು ಹಿಂತಿರುಗಿ ಬರುವುದಿಲ್ಲ. ಆದ್ದರಿಂದ ಹೇಗಾದರೂ ಆಗಲಿ, ಋಣಿಯಾದರೂ ಚಿಂತೆಯಿಲ್ಲ, ಪುಷ್ಕಲವಾಗಿ ಯಥೇಚ್ಛವಾಗಿ ತುಪ್ಪ ಹಾಕಿಕೊಂಡು ನಾವುಗಳೆಲ್ಲರೂ ಊಟಮಾಡಬೇಕು. ತಿಂದು ತೇಗಬೇಕಾದುದೇ ನಮ್ಮೆಲ್ಲರ ಕರ್ತವ್ಯ; ಎಂಬುದೇ ಈ ಸಿದ್ಧಾಂತದ ಧರ್ಮೋಪದೇಶ; ಇದೇ ಪರಮ ಪುರುಷಾರ್ಥ.

(ಮುಂದುವರಿಯುವುದು.)

ಸಿರಿಗನ್ನಡಂ ಗೆಲ್ಗೆ




ಶುಕ್ರವಾರ ಡಿಸೆಂಬರ್ ೧, ೧೯೪೪

## ಹೊಸ ಪ್ರಪಂಚದ ಘಟನೆ

ಮೈಸೂರಿನ ವೃದ್ಧ ಪಿತಾಮಹರೆನ್ನಿಸಿಕೊಂಡಿದ್ದು, ಬಹುಕಾಲ ನಮ್ಮ ಜನಜೀವನದಲ್ಲಿ ಮುಂದಾಳುಗಳಾಗಿದ್ದು, ತಮ್ಮ ಅನುಭವದಿಂದಲೂ ವ್ಯವಹಾರಜ್ಞಾನದಿಂದಲೂ ಅನೇಕ ಜನವರ್ಗಗಳಲ್ಲಿ ತಮಗಿದ್ದ ಪ್ರಭಾವದಿಂದಲೂ ಒಂದು ಬಗೆಯ ವಿಶೇಷ ಸೇವೆಯನ್ನು ಅರುವತ್ತು ವರ್ಷಕ್ಕೆ ಮೀರಿ ಸಲ್ಲಿಸಿದ ಎಂ. ವೆಂಕಟಕೃಷ್ಣಯ್ಯನವರ ನೆನಪಾಗಿ ಏನಾದರೊಂದು ಉತ್ಸವವನ್ನು ಅವರ ಮಿತ್ರರೂ ಶಿಷ್ಯರೂ ನಡಸುತ್ತಲೇ ಇದ್ದಾರೆ. ಉಪಾಧ್ಯಾಯರಾಗಿ, ಪತ್ರಿಕಾ ಕರ್ತರಾಗಿ, ಪ್ರಜಾಪ್ರತಿನಿಧಿಗಳಾಗಿ, ಸಾಧಾರಣ ಒಬ್ಬ ಕೂಲಿಯವನಿಂದ ಹಿಡಿದು ಆಳುವ ಮಹಾಸ್ವಾಮಿಯವರೆಗೂ ಎಲ್ಲ ಮಟ್ಟದ ಜನರಿಗೂ ಬೇಕಾದವರಾಗಿ ದುಡಿದು ಸೇವೆ ಸಲ್ಲಿಸಿದ ಅಂಥ ಹಿರಿಯರ ಕೀರ್ತಿಯು ನೆನಪಾಗಿ ಬಹುಕಾಲ ನಿಲ್ಲುವಂಥ ಒಂದು ಏರ್ಪಾಟು ನಡೆಯಬೇಕಾದ್ದು ಅಗತ್ಯ. ಅದಕ್ಕೆ ಧನಸಹಾಯ ಬಹುಮಟ್ಟಿಗೆ ಬೇಕು. ಅಷ್ಟು ಹಣವನ್ನು ಕೂಡಿಸುವವರೆಗೂ ಯಾವ ಕೆಲಸವನ್ನೂ ಮಾಡದೆ ಸುಮ್ಮನಿರುವದು ಸರಿಯಿಲ್ಲವೆಂದು ಅವರ ವಿಶ್ವಾಸವನ್ನು ಪಡೆದಿದ್ದ ಶ್ರೀ ಪಿ. ಆರ್. ರಾಮಯ್ಯನವರಂತಹ ಕೆಲವು ಮಹನೀಯರು ಅವರ ಹೆಸರಿನಲ್ಲಿ ವರ್ಷ ವರ್ಷವೂ ಒಂದೊಂದು ಬಗೆಯಲ್ಲಿ ಉತ್ಸವ ನಡಸಿದ್ದಾರೆ. ಈಸಲ ವೃತ್ತಪತ್ರಿಕಾ ಸಂಘದವರಿಗೆ ಅವರು ಒಪ್ಪಿಸಿದ ಸಹಾಯ ದ್ರವ್ಯದ ಆಧಾರದಮೇಲೆ ಆ ಸಂಘದವರು ತಾತಯ್ಯನವರ ಸ್ಮಾರಕ–ಉಪನ್ಯಾಸವೊಂದನ್ನು ನವೆಂಬರು ೨೨ನೇ ಬುಧವಾರ ಸಂಜೆ ಬೆಂಗಳೂರು ಇಂಟರ್‌ಮೀಡಿಯೆಟ್ ಕಾಲೇಜು ಸಭಾ ಮಂದಿರದಲ್ಲಿ ಏರ್ಪಡಿಸಿದ್ದರು. ಸುಪ್ರಸಿದ್ಧ ವಿದ್ವಾಂಸರೂ ಆರ್ಥಿಕ, ರಾಜಕೀಯ ನಿಪುಣರೂ, ನಾಡಿನ ಹಿರಿಯರಲ್ಲಿ ಗಣ್ಯರೂ, ಮೈಸೂರು ವಿಶ್ವವಿದ್ಯಾನಿಲಯದ ಅಧಿಪತಿಗಳೂ ಆದ ರಾಜಕಾರ್ಯಪ್ರವೀಣ ಶ್ರೀಮಾನ್ ಎ.ಎಸ್. ಸುಬ್ಬರಾಯರವರು ಆ ಉಪನ್ಯಾಸಕರಾಗಿ ದೊರೆತದ್ದು ಎಲ್ಲ ವಿಧದಲ್ಲಿಯೂ ತೃಪ್ತಿಕರವಾಯಿತು. ಅವರು ತಾತಯ್ಯನವರನ್ನು ಬಲ್ಲವರು; ಅವರ ಆದರ್ಶಗಳನ್ನು ಅರಿತವರು; ಅದೇ ಬಗೆಯ ವ್ಯವಹಾರ ಪ್ರಪಂಚದಲ್ಲಿ ನಾಡಿನ ಉನ್ನತಿಗಾಗಿ ಮತ್ತು ಜನಜಾಗೃತಿಗಾಗಿ ಕುಂದದ ಶ್ರದ್ಧೆಯಿಂದ ದುಡಿಯುತ್ತಿರುವವರು. ತತ್ವಭಾಗದಲ್ಲಿ ಹೇಗೆ ನಿಷ್ಣಾತರಾಗಿ ಮೇಧಾವಿಗಳಾಗಿ ಇದ್ದಾರೆಯೋ, ಕಾರ್ಯಸಾಧನೆಯಲ್ಲಿಯೂ ಹಾಗೆಯೇ ದಕ್ಷರಾಗಿರುವವರು. ಇಂಥವರು ಆರಿಸಿಕೊಂಡ ವಿಷಯ, ಉಪನ್ಯಾಸಮಾಡಿದ ರೀತಿ, ಎರಡೂ ಆ ಸನ್ನಿವೇಶಕ್ಕೆ ಕಳೆ ಕೊಟ್ಟವು.

ಉಪನ್ಯಾಸದ ವಿಷಯ, 'ಹೊಸ ಪ್ರಪಂಚದ ಘಟನೆ' ಎಂದು ಕನ್ನಡಿಸಬಹುದಾದ "The New World Order" ಎಂಬುದು. ತುಂಬಿದ ಸಭೆಯಲ್ಲಿ ನಿಂತು ಸುಮಾರು ಐವತ್ತು ನಿಮಿಷಗಳ ಕಾಲ ವಿಚಾರ ಪುಷ್ಟವಾದ, ವಿದ್ವತ್ಪೂರ್ಣವಾದ, ಆದರ್ಶ ತೋರಿಸುವ ಭಾಷಣವನ್ನು ತಮ್ಮದೇ ಆದ, ಖಚಿತವಾದ, ಅಡಕವಾದ ಶೈಲಿಯಲ್ಲಿ ಅವರು ಮಾಡಿದರು. ಪ್ರಪಂಚದಲ್ಲಿ ಒಂದು ಹೊಸ ಘಟನೆ ಆಗಬೇಕಾಗಿದೆ. ಇದುವರೆಗೂ ನಡೆದು ಬಂದ ಆರ್ಥಿಕ, ರಾಜಕೀಯ, ಸಂಕುಚಿತವೃತ್ತಿಯಿಂದಲೂ, ಎಲ್ಲಕಡೆಯೂ ಬೆಳೆದು ಬಂದಿರುವ ರಾಷ್ಟ್ರಲೋಭದಿಂದಲೂ ಅದಕ್ಕೆ ಸಂಬಂಧಿಸಿದಂತೆ ಬೆಳೆದಿರುವ ಸಾಮ್ರಾಜ್ಯದಾಹ ಮತ್ತು ದುರ್ಬಲರಮೇಲಿನ ಪ್ರಬಲರ ದಾಳಿಗಳೂ ಹೇಗೆ ಭೂಮಿಯನ್ನು ಕೆಡಿಸಿವೆ; ಇಲ್ಲಿ ಪುನಃ ಶಾಂತಿ ಸಮಾಧಾನ, ಸ್ವಾತಂತ್ರ್ಯ, ಸಮತೆ, ಸೋದರತೆ ನೆಲಸಬೇಕಾದರೆ ಯಾವ ಬಗೆಯ ಮನೋಧರ್ಮ ಹುಟ್ಟಿ ಬಲಿಯಬೇಕು, ಯಾವ ರೀತಿ ನೀತಿ ಕಾರ್ಯ ಯೋಜನೆಗಳು ನಡೆಯಬೇಕು, ಎಂಬುದನ್ನು ವಿವರಿಸಿದರು. ಇಂದಿನ ಸ್ಥಿತಿಯನ್ನು ನೋಡಿದರೆ ಆಶೆ ಭರವಸೆಗಳಿಲ್ಲ; ಜನ, ಜನಾಂಗಗಳ ದೃಷ್ಟಿ, ಕಾರ್ಯಮಂಡಲಗಳನ್ನು ನೋಡಿದರೆ, ಒಟ್ಟಿಗೆ ಮನುಷ್ಯ ಸ್ವಭಾವವೇ ಬದಲಾದ ಹೊರತು ಹೆಚ್ಚು ಮಂಗಳ ದೊರಕುವ ಸಂಭವವಿಲ್ಲ; ಮೇಲೆ ಹೇಳಿವಂಥ ಅಂತರ ರಾಷ್ಟ್ರೀಯ ಯೋಜನೆಗಳ ಮಾತು, ಪ್ರಚಾರ ಲೋಕವ್ಯವಹಾರವಿಲ್ಲದ ಕೇವಲ ಆದರ್ಶವಾದಿಗಳ ಕನಸು; ಸಾಧಿಸಲಾಗುವ ಸಂಗತಿಯಲ್ಲ ಎಂಬ ಇಂದು ಪ್ರಬಲವಾಗಿರುವ ಆಶಾರಹಿತ ದೃಷ್ಟಿಯನ್ನು ಉಪನ್ಯಾಸಕರು ಖಂಡಿಸಿದರು. ಪ್ರಪಂಚಕ್ಕೆ ಮುನ್ನಡೆ ಬಂದಿರುವುದು ಎಲ್ಲಾ ಕಾಲದಲ್ಲಿಯೂ ಇಂತಹ ಆದರ್ಶಗಳಿಂದಲೇ. ಸ್ವಪ್ನ ಜೀವಿಗಳಂತೆ ಹೊರಗೆ ಕಾಣುತ್ತಿದ್ದರೂ ಶ್ರದ್ಧಾಳುಗಳಾದ ಇಂಥವರಿಂದಲೇ ಪ್ರಪಂಚದ ಎಲ್ಲ ಏಳಿಗೆ ನಡೆದಿರುವುದು. ಎಲ್ಲಿಯೋ ಮೂಲೆಯಲ್ಲಿ ಕುಳಿತು ಕನಸು ಕಾಣುತ್ತಿದ್ದ ಒಬ್ಬನ ಭಾವವೊ, ಮಾತೊ, ಬದುಕೊ ಕೆಲಸವೊ ಪ್ರಪಂಚವನ್ನು ಉದ್ಧರಿಸಿದೆ- ಆ ಬೆಂಕಿಯ ಕಿಡಿ ಉರಿದು ಜ್ವಾಲೆಯಾಗಿ ಭೂಮ್ಯಾಕಾಶಗಳನ್ನು ತುಂಬಿ, ಬೆಳಕು ಶಾಖ ಕೊಟ್ಟು ಅನೇಕ ಬಗೆಯ ಆಹಾರಗಳನ್ನು ಪಾಕ ಮಾಡಿ ಜನ ವರ್ಗವನ್ನೆಲ್ಲಾ ಬದುಕಿಸಿದೆ. ಅಂತಹ ಕನಸುಕಾಣುವ ಜನ ದೇಶದಲ್ಲಿ ಹೆಚ್ಚಿದಂತೆಲ್ಲಾ ಪ್ರಪಂಚಕ್ಕೆ ಕಲ್ಯಾಣವಾಗುವುದು ಎಂದರು. ಹಿಂದೆ ಅಂತರ ರಾಷ್ಟ್ರೀಯ ಐಕಮತ್ಯಕ್ಕಾಗಿ ಶಾಂತಿ ಸಾಧನೆಗಾಗಿ ಅನೇಕರು ಮಡಿದಿದ್ದರೂ ಸಂಸ್ಥೆ ಯೋಜನೆಗಳನ್ನು ನಿರ್ಮಾಣ ಮಾಡಿ ನಡಸಿದ್ದರೂ ಅವುಗಳು ಏಕೆ ಕೃತಕಾರ್ಯವಾಗಲಿಲ್ಲವೆಂಬುದನ್ನು ೧೮೧೫ ನೆಯ ವರ್ಷದಿಂದ ಹಿಡಿದು ಇಂದಿನವರೆಗೂ ನಡೆದ ಪ್ರಯತ್ನಗಳಿಂದ ನಿದರ್ಶಿಸಿದರು. ಎಲ್ಲ ಯುದ್ಧಗಳ ನಿವಾರಣೆಗಾಗಿ; ಸಣ್ಣ ರಾಷ್ಟ್ರಗಳ ಸ್ವಾಸ್ಥ್ಯ ಸ್ವಾತಂತ್ರ್ಯಕ್ಕಾಗಿ; ಪ್ರಪಂಚದಲ್ಲಿ ಪ್ರಜಾಸತ್ತಾತ್ಮಕ ತತ್ತ್ವವನ್ನು ನಿಲ್ಲಿಸುವುದಕ್ಕಾಗಿ ಹೋದ ಮಹಾಯುದ್ಧ ಒಂದು ನಡೆದರೂ ಯುದ್ಧದ ಪರಿಣಾಮವಾಗಿ ರೂಢಿಸಿದ ವರ್ಸೇ (Versailles) ಒಪ್ಪಂದವಾಗಲಿ ಅಂತರ ರಾಷ್ಟ್ರೀಯ ಜನಾಂಗಗಳ ಸಂಘ (League of Nations) ಸ್ಥಾಪನೆ ಕಾರ್ಯ ಕಲಾಪಗಳಾಗಲಿ ಏಕೆ ಗುರಿಯನ್ನು ಸಾಧಿಸದೆ ಹೋಗಬೇಕಾಯಿತು ಎಂಬುದನ್ನು ಸ್ಪಷ್ಟಪಡಿಸಿದರೂ ಆ ಅನುಭವದಿಂದ ಧೈರ್ಯ ತಂದುಕೊಳ್ಳಬೇಕೇ ಹೊರತು ಅದರಿಂದ ಎದೆಗೆಡಬೇಕಾಗಿಲ್ಲವೆಂದು ಹೇಳಿದರು. ಈ ಕೆಲಸ ಆಗಬೇಕೆ - ಬೇಡವೆ? ಈಗ ನಡೆಯುತ್ತಿರುವ ಹಾಗೆಯೇ ರಾಗದ್ವೇಷಗಳಿಂದ ಖ್ಯಾತಿ ಪೂಜಾ ಲಾಭಗಳ ಆಶೆಯಿಂದಲೇ ಅಂತರ ರಾಷ್ಟ್ರೀಯ ಕಾರ್ಯಗಳು ನಡೆಯುವುದು ಕ್ಷೇಮವೆ? ಕ್ಷೇಮವಲ್ಲದಿದ್ದರೆ ಅಂತಹ ಕ್ಷೇಮವನ್ನು ಸಾಧಿಸುವುದು ಅಗತ್ಯವಲ್ಲವೆ? ಅಗತ್ಯವಾಗಿರುವುದನ್ನು ಸಾಧ್ಯವಾಗಿ ಮಾಡತಕ್ಕದ್ದು ಜನದ ಕೈಯಲ್ಲಿಲ್ಲವೆ? ಅದನ್ನು ಆಗಮಾಡಿಸಬೇಡವೇ? ಎಂಬ ಪ್ರಶ್ನೆಗಳನ್ನು ಕೇಳಿ ಅವುಗಳಿಗೆ ಉತ್ತರಗಳನ್ನು ಕೊಟ್ಟರು.

ಪ್ರಪಂಚವನ್ನು ಒಂದುಗೂಡಿಸಬೇಕಾದರೆ ಭೂಮಂಡಲದ ಬೇರೆ ಬೇರೆ ಭಾಗಗಳನ್ನು ಸೇರಿಸುವ ಮೂರು ದಾರಿಗಳಿವೆ ಎಂದರು. ಒಂದನೆಯದು: ಸಾಮ್ರಾಜ್ಯ ಪದ್ಧತಿ; ಎರಡನೆಯದು: ಕಾನ್‌ಫರೆನ್ಸ್ ಪದ್ಧತಿ, ಮೂರನೆಯದು-ಸಂಯುಕ್ತ ರಾಜ್ಯ ಪದ್ಧತಿ. ಒಂದು, ಎರಡು ಹೇಗೆ ಸಮರ್ಪಕವಲ್ಲನೆಂದು ವಿವರಿಸಿದಮೇಲೆ ಯಾವುದಾದರೊಂದು ಬಗೆಯ ಸಂಯುಕ್ತ ರಾಜ್ಯ ತತ್ತ್ವದ ಆಧಾರದ ಮೇಲೆಯೇ ಹೊಸ ಘಟನೆಯನ್ನು ಏರ್ಪಡಿಸಬೇಕು ಎಂದು ಹೇಳಿ. 'ಲಯನೆಲ್ ಕರ್ಟಿಸ್', ಎಂಬವರ ವಾದವನ್ನೂ 'ಸ್ಟ್ರೇಟ್' ಎಂಬವರ "ಯೂನಿಯನ್" ಪುಸ್ತಕದಲ್ಲಿನ ಸಲಹೆಗಳನ್ನೂ ವಿಮರ್ಶಿಸಿ ಈ ಎರಡನೆಯ ಬಗೆಯ ತತ್ತ್ವವನ್ನು ಸಾಧಾರಣವಾಗಿ ಒಪ್ಪಬಹುದೆಂದು ಹೇಳಿದರು.

# ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು

ಅಧ್ಯಕ್ಷರು :
ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರಾದ
**ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ. ಸಿ. ಐ. ಇ.**
ಮಹಾಸ್ವಾಮಿಯವರು

---

# ೨೪ ನೆಯ ಕನ್ನಡ ಸಾಹಿತ್ಯ ಸಮ್ಮೇಳನ

## ಬೆಳಗಾವಿನಲ್ಲಿ

**ಸಮಾಚಾರಪತ್ರಿಕೆ**

ಈ ವರ್ಷ ಡಿಸೆಂಬರ್ ತಿಂಗಳಿನಲ್ಲಿ ನಡೆಯಬೇಕಾಗಿರುವ ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಬೆಳಗಾವಿನಲ್ಲಿ ನಡಸಬೇಕೆಂದು ಶ್ರೀ|| ಎಸ್. ಎನ್. ಅಂಗಡಿ, ಅವರು ಬಳ್ಳಾರಿಯ ಸಮ್ಮೇಳನ ಸಮಾರಂಭದಲ್ಲಿ ಪರಿಷತ್ತಿಗೆ ಆಹ್ವಾನ ವಿತ್ತಿದ್ದರು. ತಾ|| ೧೦--೬--೧೯೩೯ರಲ್ಲಿ ಬೆಳಗಾವಿನಲ್ಲಿ ಅಲ್ಲಿನ ಕನ್ನಡ ಮುಂದಾಳುಗಳ ಸಭೆ ಸೇರಿ ಸಮ್ಮೇಳನದ ಪೂರ್ವಸಿದ್ಧತೆಗಾಗಿ ಒಂದು ಕಾರ್ಯಕಾರಿ ಮಂಡಲವೇರ್ಪಟ್ಟು ಮಂಡಲಿಯ ಪರವಾಗಿ ಶ್ರೀಗಳಾದ ನರಸಿಂಗರಾವ್ ಜೋಶಿ ಮತ್ತು ವ್ಹಿ. ಪಿ. ಕಿತ್ತೂರ ಇವರು ತಾ|| ೧೧--೯ -೧೯೩೯ ರಲ್ಲಿ ಪರಿಷತ್ತಿಗೆ ಮೇಲಿನ ಆಹ್ವಾನವನ್ನು ಸ್ಥಿರೀಕರಿಸಿ ಪತ್ರ ಬರೆದರು. ಪರಿಷತ್ತಿನ ಕಾರ್ಯಸಮಿತಿ ವಿಶ್ವಾಸಪೂರ್ವಕವಾಗಿ ಅವರ ಆಹ್ವಾನವನ್ನು ತಾ|| ೨೦-೯-೧೯೩೯ರಲ್ಲಿ ಸ್ವೀಕರಿಸಿತು.

ಈ ಸಲದ ಸಮ್ಮೇಳನವನ್ನು ಯಶಸ್ವಿಯಾಗಿ ನಡಸಬೇಕೆಂದು ಬೆಳಗಾವಿನ ಕನ್ನಡಿಗರು ಬಹಳ ಉತ್ಸಾಹದಿಂದ ಕೆಲಸ ಮಾಡುತ್ತಿದ್ದಾರೆ. ಬೆಳಗಾಂ ಜಿಲ್ಲೆಯ ಮತ್ತು ಅದಕ್ಕೆ ಹೊಂದಿರುವ ಸಂಸ್ಥಾನಗಳ ಕನ್ನಡಿಗರೆಲ್ಲರು ಬೆಂಬಲವಾಗಿ ನಿಂತಿದ್ದಾರೆ.

೫೦ ಮಂದಿಗೆ ಮೇಲ್ಪಟ್ಟು ಮಹನೀಯರನ್ನೊಳಗೊಂಡ ಸ್ವಾಗತ ಸಮಿತಿ ಏರ್ಪಾಟಾಗಿದೆ. ಶ್ರೀ|| ಎಂ. ಪಿ. ಪಾಲಿಯವರು ಸ್ವಾಗತಾಧ್ಯಕ್ಷರಾಗಿದ್ದಾರೆ. ಶ್ರೀ||ಗಳಾದ ದಾತಾರ ಬಳವಂತರಾಯರು ಮತ್ತು ಡಾ|| ಎಸ್. ಸಿ. ನಂದಿಮಠ ಅವರು ಸ್ವಾಗತ ಸಮಿತಿಯ ಉಪಾಧ್ಯಕ್ಷರುಗಳಾಗಿದ್ದಾರೆ. ಶ್ರೀಗಳಾದ ವ್ಹಿ. ಪಿ. ಕಿತ್ತೂರ ಮತ್ತು ಜೋಶಿ ನರಸಿಂಗರಾಯರು ಗೌ|| ಕಾರ್ಯದರ್ಶಿಗಳಾಗಿಯೂ, ಡಾ|| ಎಸ್. ಸಿ. ನಂದೀಮಠರವರು ಗೌ|| ಕೋಶಾಧ್ಯಕ್ಷರಾಗಿಯೂ ಇದ್ದಾರೆ.

ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ, ಇವುಗಳ ಏಳಿಗೆಗೂ ಕನ್ನಡಿಗರ ಒಕ್ಕೂಟಕ್ಕೂ ಸಂಬಂಧಪಟ್ಟ ಪ್ರಶ್ನೆಗಳು ಪರ್ಯಾಲೋಚನೆಗಾಗಿ ಬಂದು ಮುಖ್ಯವಾದ ತೀರ್ಮಾನಗಳಾಗತಕ್ಕದ್ದಿವೆ. ಆದುದರಿಂದ ಕರ್ನಾಟಕದ ಎಲ್ಲ ಭಾಗಗಳಿಂದಲೂ ಕನ್ನಡದ ಅಭಿಮಾನಿಗಳು ಬಂದು ಸಮ್ಮೇಳನ ಯಶಸ್ವಿಯಾಗುವಂತೆ ಸಹಕರಿಸಬೇಕೆಂದು ಪರಿಷತ್ತು ಬೇಡುತ್ತದೆ.

ಸಮ್ಮೇಳನ ೧೯೩೯ ನೆಯ **ಡಿಸೆಂಬರ್ ತಿಂಗಳು ೨೫, ೨೬, ಮತ್ತು ೨೭ ನೆಯ** ತಾರೀಖುಗಳಲ್ಲಿ (ಕ್ರಿಸ್‌ಮಸ್ ರಜಾ ಕಾಲದಲ್ಲಿ) ಸೇರುವಂತೆ ನಿಶ್ಚಯವಾಗಿದೆ.

ಪರಿಷತ್ತಿನ ಮತ್ತು ಸ್ವಾಗತ ಮಂಡಲಿಯವರ ಸೂಚನೆಯನ್ನು ಮನ್ನಿಸಿ ಸುಪ್ರಸಿದ್ಧ ದೇಶಭಕ್ತರೂ, ಕನ್ನಡನಾಡಿನ ಹಿರಿಯರೂ, ನಾಡು ನುಡಿಗಳ ಸೇವೆಯಲ್ಲಿ ನುರಿತ ಮುಂದಾಳುಗಳೂ ಆದ ಶ್ರೀ|| **ಮುದವೀಡು ಕೃಷ್ಣರಾಯರು** ಈ ಸಲದ ಸಮ್ಮೇಳನದ **ಮಾನ್ಯ ಅಧ್ಯಕ್ಷರಾಗಿರಲು** ಒಪ್ಪಿರುವುದು ವಿಶೇಷ ಸಂತೋಷದ ಸಂಗತಿ.

ಸಾಹಿತಿಗಳ ಗೋಷ್ಠಿ, ನಾಟ್ಯಗೋಷ್ಠಿ, ಮಹಿಳೆಯರ ಗೋಷ್ಠಿ, ಪತ್ರಿಕಾಕರ್ತರ ಗೋಷ್ಠಿ ಮತ್ತು ಸಂಘಗಳ ಗೋಷ್ಠಿ ಇವುಗಳನ್ನು ನಡಸುವ ಉದ್ದೇಶ ಸ್ವಾಗತ ಸಮಿತಿಯವರಿಗೆ ಇದೆ.

ಕನ್ನಡ ಭಾಷಾ ಸಾಹಿತ್ಯ ವಿಚಾರಗಳಿಗೆ ಸಂಬಂಧಪಟ್ಟ ಭಾಷಣಗಳು, ಸಾಹಿತ್ಯ ವಾಚನ ಮುಂತಾದ ಕಾರ್ಯಗಳಿಗೆ ಅವಕಾಶ ಕೊಡಲಾಗುತ್ತದೆ. ಈ ಕಾರ್ಯಗಳಲ್ಲಿ ಭಾಗವಹಿಸಲಿಚ್ಛಿಸುವ ಮಹನೀಯರು ತಮ್ಮ ಉದ್ದೇಶವನ್ನೂ ವಿಷಯ ಮುಂತಾದ ವಿವರಗಳನ್ನೂ ಮತ್ತು ಸಮ್ಮೇಳನದಲ್ಲಿ ನಿರ್ಣಯಗಳನ್ನು ಸೂಚಿಸಬೇಕೆಂದಿರುವವರು ಆ ನಿರ್ಣಯಗಳನ್ನೂ ಪರಿಷತ್ತಿನ ಗೌ|| ಕಾರ್ಯದರ್ಶಿಯವರಿಗಾಗಲಿ ಸ್ವಾಗತ ಮಂಡಲಿಯ ಕಾರ್ಯದರ್ಶಿಯವರಿಗಾಗಲಿ ತಾ|| ೯-೧೨-೩೯ ರೊಳಗಾಗಿ ಬರೆಹದ ಮೂಲಕ ತಿಳಿಸಬೇಕೆಂದು ಪ್ರಾರ್ಥನೆ.

ಸಮ್ಮೇಳನದಲ್ಲಿ **ನಾಟಕ, ಯಕ್ಷಗಾನ, ಲಾವಣಿಗಳ** ಪ್ರದರ್ಶನಗಳಿಗೂ ಅವಕಾಶ ಕೊಡಬೇಕೆಂಬ ಉದ್ದೇಶವಿದೆ. ಕನ್ನಡನಾಡಿನ ನಾಟಕ ಸಂಘಗಳವರೂ, ಯಕ್ಷಗಾನ ಮಂಡಲಿಯವರೂ, ಲಾವಣಿಕಾರರೂ ಮುಂದಾಗಿ **ತಾ|| ೬-೧೨-೧೯೩೯ ರೊಳಗೆ** ಪರಿಷತ್ತಿನ ಗೌ|| ಕಾರ್ಯದರ್ಶಿಗಳಿಗಾಗಲಿ ಅಥವಾ ಸ್ವಾಗತಮಂಡಲಿಗಾಗಲಿ ದರಖಾಸ್ತುಗಳನ್ನು ಕಳಿಸಬೇಕೆಂದು ಬೇಡಿಕೆ. ಸಮ್ಮೇಳನಕ್ಕೆ ಸುಮಾರು ಒಂದು ವಾರ ಮುಂಚಿತವಾಗಿ ಪರಿಷತ್ತು ಒಪ್ಪಿದ ದರಖಾಸ್ತುದಾರರಿಗೆ ಮಾತ್ರ ಉತ್ತರ ಬರೆಯಲಾಗುವುದು. ಹಾಗೆ ಪರಿಷತ್ತು ಒಪ್ಪಿದ ದರಖಾಸ್ತುದಾರರು ತಮ್ಮ ಪ್ರಯಾಣದ ವೆಚ್ಚ ಮುಂತಾದ ವಿಶಿಷ್ಟ ಖರ್ಚುಗಳನ್ನೂ ತಾವೇ ವಹಿಸಿಕೊಳ್ಳಲು ಸಿದ್ಧರಾಗತಕ್ಕದ್ದು ; ಮತ್ತು ಕೂಡಿದ ಮಟ್ಟಿಗೂ ತಮ್ಮ ತಮ್ಮ ಸಲಕರಣೆ ಸಾಮಗ್ರಿಗಳನ್ನು ತಾವೇ ಒದಗಿಸಿಕೊಳ್ಳಬೇಕು. ಸ್ವಾಗತ ಮಂಡಲಿಯವರು ಸಂದರ್ಭ ಸನ್ನಿವೇಶಗಳ ಅನುಸಾರ ತಮ್ಮ ಅನುಕೂಲವಿರುವಷ್ಟು ಮಾತ್ರ ಸಹಕರಿಸಬಹುದು. ನಾಟಕ ಸಂಘದವರಾಗಲಿ ಯಕ್ಷಗಾನ ಮಂಡಲಿಯವರಾಗಲಿ ಇತರ ಬಗೆಯ ಪ್ರದರ್ಶನಕಾರರಾಗಲಿ ತಮ್ಮ ಪ್ರದರ್ಶನಗಳಿಗೆ ಸ್ವಾಗತ ಮಂಡಲಿಯ ಅಥವಾ ಪರಿಷತ್ತಿನ ಒಪ್ಪಿಗೆ ಪಡೆದು ಪ್ರವೇಶ ಶುಲ್ಕವನ್ನು ಹಾಕಬಹುದು.

ಕನ್ನಡನಾಡಿನ ನಾನಾಭಾಗಗಳಲ್ಲಿರುವ ದೇಶಭಕ್ತರೂ, ಭಾಷಾಭಿಮಾನಿಗಳೂ, ವಿದ್ವಾಂಸರೂ, ಸಾಹಿತಿಗಳೂ, ಅಭಿಮಾನಿಗಳೂ ಸಮ್ಮೇಳನದಲ್ಲಿ ಭಾಗವಹಿಸಿ ತಾಯ್ನುಡಿಯ ಏಳಿಗೆಯ ಕೆಲಸಕ್ಕೆ ತಮ್ಮ ಬೆಂಬಲ ಕೊಡಬೇಕೆಂದು ಕನ್ನಡಸಾಹಿತ್ಯ ಪರಿಷತ್ತು ತನ್ನ ಪರವಾಗಿಯೂ ಬೆಳಗಾವಿನ ಸ್ವಾಗತ ಮಂಡಲಿಯಪರವಾಗಿಯೂ ಮನಃಪೂರ್ವಕವಾಗಿ ಪ್ರಾರ್ಥಿಸುತ್ತದೆ.

ತಾ|| ೨೪-೧೧-೧೯೩೯
ಬೆಂಗಳೂರು.

**ಸಿ. ಕೆ. ವೆಂಕಟರಾಮಯ್ಯ**
ಗೌ|| ಕಾರ್ಯದರ್ಶಿ
**ಕ. ಸಾ. ಪರಿಷತ್ತು**

ಎಲ್ಲಕ್ಕೂ ಹೆಚ್ಚಾಗಿ ಜನದಲ್ಲಿ ಅಂತರ ರಾಷ್ಟ್ರೀಯ ಭಾವನೆ, ಆದರ ಅತ್ಯಾವಶ್ಯಕತೆಯ ತಿಳಿವು ಮೂಡಿ ಆ ಕಡೆಯಲ್ಲಿ ಮನವೊಲಿದು ಎಲ್ಲರೂ ಕೆಲಸ ಮಾಡಬೇಕೆಂದೂ ಅದಕ್ಕೆ ತಕ್ಕ ಶಿಕ್ಷಣ ಸಂಸ್ಕಾರ ಕೊಡಬೇಕಾದುದು ಪ್ರಪಂಚದ ಎಲ್ಲ ಭಾಗದ ವಿದ್ಯಾಧಿಕಾರಿಗಳ ಮತ್ತು ಉಪಾಧ್ಯಾಯರ ಕೈಯಲ್ಲಿದೆ ಎಂದೂ, ಆ ಮಹನೀಯರು ಇಂದಿನ ಕನಸನ್ನು ನಾಳೆಯ ನೆನಸನ್ನಾಗಿ ಮಾಡಿಕೊಟ್ಟು ಉಪಕರಿಸಬೇಕೆಂದೂ ಪ್ರಾರ್ಥಿಸಿದರು.

ಇಂಥ ಉಪನ್ಯಾಸಗಳು ಹತ್ತಾರು ಆಗಬೇಕು. ಇಂಥ ಉಪನ್ಯಾಸಕರು ದೇಶದಲ್ಲೆಲ್ಲಾ ತಮ್ಮ ಪ್ರಭಾವವನ್ನು ಹರಡಿ ಜನೋಪಕಾರ ಮಾಡುತ್ತಾ ಬರಬೇಕು; ಎಂದರೆ ಭರತಖಂಡದ ಹಿರಿಯ ಸಂಪ್ರದಾಯ ಕಾಲದಿಂದ ಕಾಲಕ್ಕೆ ಅನಂತವಾಗಿ ನಡೆದಂತಾಗುತ್ತದೆ.

ತಾಳಯ್ಯನವರ ಸ್ಮಾರಕವಾಗಿ ಇಂಥವೇ ಉಪನ್ಯಾಸಗಳೂ, ಜನಹಿತ ಕಾರ್ಯಗಳೂ ಸಂತತವಾಗಿ ನಡೆಯುತ್ತಿರಲೆಂದು ಹಾರೈಸುತ್ತೇವೆ.

---

## ಪರಿಷತ್ತಿನ ಸುದ್ದಿ

ಹೋದ ತಿಂಗಳು ೩೦ನೆಯ ತಾರೀಖು ಮಂಗಳವಾರ ಮೈಸೂರು ಪ್ರಾಂತ ಸಮಿತಿಯು ಏರ್ಪಡಿಸಿದ್ದ ದೇವರ ನಾಮ ಮತ್ತು ಅಭಿನಯ ಸ್ಪರ್ಧೆಗಳು ನಡೆದವು. ಬೆಂಗಳೂರಿನ ಪ್ರೌಢಶಾಲೆಗಳ ವಿದ್ಯಾರ್ಥಿನಿಯರಿಗೆ ಮಾತ್ರ ಈ ಸ್ಪರ್ಧೆಗಳನ್ನು ಏರ್ಪಡಿಸಿತ್ತು. ದೇವರ ನಾಮ ಸ್ಪರ್ಧೆಗೆ ೧೧ ವಿದ್ಯಾರ್ಥಿನಿಯರೂ ಅಭಿನಯ ಸ್ಪರ್ಧೆಗೆ ೧೨ ವಿದ್ಯಾರ್ಥಿನಿಯರೂ ಬಂದಿದ್ದರು. ಅಭಿನಯ ಸ್ಪರ್ಧೆಗೆ ಪ್ರೊ|| ಎಲ್. ರಾಮರಾಯರೂ, ಡಾ|| ಕೆ. ಆರ್. ರಾಮಸ್ವಾಮಿಯವರೂ, ಶ್ರೀಮತಿ ಕಲ್ಯಾಣಮ್ಮನವರೂ ಮತ್ತು ದೇವರ ನಾಮ ಸ್ಪರ್ಧೆಗೆ ಶ್ರೀಮತಿ ಎಚ್. ರತ್ನಮ್ಮನವರೂ, ಶ್ರೀ ಎಲ್ ರಾಜಾರಾಯರೂ, ಶ್ರೀ ಬಿ. ಆರ್. ರಘುನಾಥ ರಾಯರೂ ಪರೀಕ್ಷಕರಾಗಿದ್ದರು. ಸ್ಪರ್ಧೆಗಳು ೬ ಘಂಟೆಗೆ ಪ್ರಾರಂಭವಾದವು. ಪರಿಷನ್ಮಂದಿರ ಬಹು ಮಂದಿ ಮಹಿಳೆಯರಿಂದಲೂ, ವಿದ್ಯಾರ್ಥಿ ವಿದ್ಯಾರ್ಥಿನಿಯರಿಂದಲೂ, ಪರಿಷತ್ತಿನ ಸದಸ್ಯರಿಂದಲೂ ತುಂಬಿತ್ತು.

ಈ ಎಲ್ಲ ಸ್ಪರ್ಧೆಗಳಲ್ಲಿ ಬಹುಮಾನ ಪಡೆದವರು :

ದೇವರನಾಮ ಸ್ಪರ್ಧೆ :

ಶ್ರೀಮತಿ ಕೆ. ಗೌರಮ್ಮ, (ವಾಣಿ ವಿಲಾಸ ಇನ್ಸಿಟ್ಯೂಟ್)
ಶ್ರೀಮತಿ ಎಸ್. ನಾಗರತ್ನ, ,,
ಶ್ರೀಮತಿ ಎಸ್. ರಾಜಮ್ಮ (ಮಹಿಳಾ ಸೇವಾ ಸಮಾಜ)
ಶ್ರೀಮತಿ ಎಸ್. ಎನ್. ಸರೋಜಮ್ಮ (ಪ್ರೈವೇಟ್).

ಶ್ರೀಗಳಾದ ಕೆ. ಎಸ್. ರಾಮಚಂದ್ರ (ಫೋರ್ಟ್ ಹೈಸ್ಕೂಲು) ಕೆ. ಆರ್. ಶ್ರೀರಂಗಾಚಾರ್ (ಸೆಂಟ್ರಲ್ ಕಾಲೇಜು) ಟಿ. ಆರ್. ಜಯರಾವ್ (ಇಂಟರ್ ಮೀಡಿಯೇಟ್ ಕಾಲೇಜು)

ಅಭಿನಯ ಸ್ಪರ್ಧೆ :

ಶ್ರೀಮತಿಗಳಾದ ಅಂಬು, ಕೆ. ಎಲ್. ಜಯಮ್ಮ, ಕುಂತಳಾಂಬ.
(ವಾಣೀವಿಲಾಸ ಇನ್ಸಿಟ್ಯೂಟಿನ ವಿದ್ಯಾರ್ಥಿನಿಯರು)

ಶ್ರೀಗಳಾದ ವೈ. ಕೃಷ್ಣಮೂರ್ತಿ (ಇಂಟರ್‌ಮೀಡಿಯೇಟ್ ಕಾಲೇಜು); ಎಚ್. ವಿ. ಬದರಿನಾಥ್ ಮತ್ತು ಡಿ. ಬಿ. ಹರೀಂದ್ರ (ಎಸ್. ಎಲ್. ಎನ್. ಹೈಸ್ಕೂಲ್); ಎನ್. ವಾಸುದೇವಾಚಾರ್ಯ; ಜೆ. ವಿಲ್ಸನ್ ಮತ್ತು ಎಸ್. ಆರ್ ಜಯರಾಮ್ (ಯುನೈಟೆಡ್ ಮಿಷನ್ ಹೈಸ್ಕೂಲು)

ಭಾರತವಾಚನ ಸ್ಪರ್ಧೆ :

ಶ್ರೀ|| ಟಿ. ಆರ್. ಜಯರಾವ್ (ಇಂಟರ್ ಮೀಡಿಯೇಟ್ ಕಾಲೇಜು) ;
ಶ್ರೀಮತಿ ಎಸ್. ಎನ್. ಸರೋಜಮ್ಮ (ಪ್ರೈವೇಟ್);
ಶ್ರೀ||ಪಿ. ಎಸ್. ಸುಬ್ಬರಾವ್ (ಪ್ರೈವೇಟ್)

ಮೈಸೂರು ಪ್ರಾಂತಸಮಿತಿಯ ಸಭೆ ಈ ತಿಂಗಳು ೬ನೇ ತಾರೀಖು ಬುಧವಾರ ಸಂಜೆ ೬ ಘಂಟೆಗೆ ಸೇರುವದು.

ಪರಿಷತ್ತಿನ ಕಾರ್ಯಸಮಿತಿಯ ಅಧಿವೇಶನ ಈ ತಿಂಗಳು ೧೧ನೇ ತಾರೀಖು ಭಾನುವಾರ ಬೆಳಗ್ಗೆ ೯ ಘಂಟೆಗೆ ಸೇರುವದು.

---

## ಸಾಗರ ಗೀತೆಗಳು

### ಪ್ರತಿಜ್ಞೆ

ಸ್ವಚ್ಛಂದ ಛಂದದಲಿ
ಜಲಕ್ರೀಡಾವೃತ್ತದಲಿ
ಅನುದಿನವು ತೆರೆಗಳು ಹಿಡಿವ ತಾಳಲಯದಿ
ಗೀತವನೊರೆದೆನೆಂದು ಗೀಳ್‌ಮಾಡಬೇಡ !
ಸಮುದ್ರವ ಸೆರೆ ಹಿಡಿದವರುಂಟೆ?
ಬಾವಿಯ ತೋಡಿ ಮುನ್ನೀರ ಬತ್ತಿಸಬಹುದೆ ?
ಅಬ್ಜ ಶಬ್ದಗಳ ಪ್ರಾರಬ್ಧದಲ್ಲಿ ಸಹ
ಮಹಾಬ್ಧಿಯ ಕಣವೊಂದು ಸೆರೆಸಿಕ್ಕಿದಯ್ಯ !
ಕೊಡದಿರು ಶರಧಿಗೆ ಷಟ್ಪದಿಯ ದೀಕ್ಷೆಯನು !

* * *

ನೀರು ನೀರಾಗಿ ಬೆಳಗು.
ನಾದಮಯವಾಗು ಹೊರಗು ಒಳಗು.
ಹಿಗ್ಗು ಹಿಗ್ಗಾಗಿ ಹರಿ, ತಗ್ಗು ತಗ್ಗಾಗಿ ಸರಿ.
ತೆರೆತೆರೆಯಾಗಿ ತೆರೆದರೆ
ನೊರೆ ನೊರೆಯಾಗಿ ಹರಿದೀತು.
ಉಕ್ಕಲಿ–ಚಿಮ್ಮಲಿ ಸಮುದ್ರದ ಸ್ವಾತಂತ್ರ್ಯ !
ಮಿಕ್ಕಲಿ-ಮೀರಲಿ ಮುನ್ನೀರ ನಿರ್ವಯಲು.
ಜರ್ಜರವಾದುದೆಲ್ಲ ಮುಳುಗಿ ಹೋಗಲಿ, ಜಲ ಸಮಾಧಿಯಲ್ಲಿ.
ಹೊಸದೆಲ್ಲ ಹುಟ್ಟಿ ಬರಲಿ,-ಹೃದಯದಾಳದಲ್ಲಿ !

* * *

ಬೇಡಯ್ಯ ! ಬಂಧಗಳ ಬಂದಿವಾಸ.
ಬರೆದದ್ದೇ ಬಂಧುರವಾಗಬಹುದು.
ಸಾಕಯ್ಯ ! ವೃತ್ತಗಳಾವರ್ತ:
ನಿನ್ನ ಮಣಿತವಿರಲಿ ಸಮುದ್ರದ ಕುಣಿತದಂತೆ !
ತರಂಗತರಂಗಗಳನೊಳಕೊಂಡ
ನವರಂಗ ವಾರಿಧಿಯಂತೆ
ವೃತ್ತಬಂಧಗಳು ಸಂಧಿಸಿ ಬಂದ
ಸಮುದ್ರವಾಗು, ಕವಿಯೆ !
ಕವಿಗಳ ಸಮುದ್ರಗುಪ್ತನಾಗು !

—ಜೀವನ.

---

## ವ್ಯವಸಾಯ ಶಾಲೆಯ ರಜತೋತ್ಸವ ಸಮಾರಂಭ

### ದ್ವಿತೀಯ ಸಚಿವರ ಭಾಷಣ

ಹೆಬ್ಬಾಳ್ ವ್ಯವಸಾಯ ಶಾಲೆಯ ರಜತೋತ್ಸವವು, ರಾಜಮಂತ್ರ ಪ್ರವೀಣ ಕೆ. ವಿ. ಅನಂತರಾಮನ್ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಅಧ್ಯಕ್ಷರು ತಮ್ಮ ಭಾಷಣದಲ್ಲಿ ಶಾಲೆಯ ಕಾರ್ಯವನ್ನು ವಿಮರ್ಶಿಸಿದರು. ಗ್ರಾಮಾಂತರಗಳಿಂದ ಹೆಚ್ಚು ಹೆಚ್ಚಾಗಿ ಯುವಕರನ್ನು ಆಕರ್ಷಿಸುವಂತೆ ಶಾಲೆಗೆ ಸೇರುವ ಅರ್ಹತೆಯನ್ನು ಪುನರಚಿಸಬೇಕೆಂದೂ, ಕನ್ನಡದಲ್ಲೇ ಶಿಕ್ಷಣವನ್ನು ಕೊಡುವ ವ್ಯವಸ್ಥೆ ಮಾಡಬೇಕೆಂದೂ, 'ವಿದ್ಯಾರ್ಥಿಗಳು ಜಮೀನುಗಳಲ್ಲಿ ಪ್ರಯೋಗಿಕ ಶಿಕ್ಷಣ ಹೊಂದಲು ಹೆಚ್ಚು ಗಮನಕೊಡಬೇಕೆಂದೂ ಶಾಲೆಯ ವಿದ್ಯಾರ್ಥಿಗಳ ಜೀವನದ ಸ್ಥಿತಿಯು ಗ್ರಾಮಾಂತರಗಳ ಜೀವನದ ಸ್ಥಿತಿಗೆ ಹೊಂದಿಕೊಂಡಿರಬೇಕೆಂದೂ, ಶಾಲೆಯ ಅಧಿಕಾರವರ್ಗವು ಶಾಲೆಯಿಂದ ಉತ್ತೀರ್ಣರಾದ ವಿದ್ಯಾರ್ಥಿಗಳೊಡನೆ ಸಂಬಂಧವಿಟ್ಟುಕೊಂಡು ಅದರಿಂದ ವ್ಯವಸಾಯದ ಪ್ರಯೋಗಿಕ ಪರೀಕ್ಷೆಗಳನ್ನು ನಡಸಿ ಫಲಹೊಂದಬೇಕೆಂದೂ, ವ್ಯವಸಾಯ ಇಲಾಖೆ ರೆವಿನ್ಯೂ ಇಲಾಖೆಯಿಂದ ಜಮೀನನ್ನು ಪಡೆದು ಜಮೀನಿಲ್ಲದ ವಿದ್ಯಾರ್ಥಿಗಳಿಗೆ ಕೊಡಬೇಕೆಂದೂ ಹೇಳಿದರು.

## ಸಾಹಿತ್ಯಾವಲೋಕನ

[ಎಂ. ವಿ. ಪ್ರಭು, ಎಂ.ಎ., ಎಲ್.ಟಿ.]

ಸಾಹಿತ್ಯವನ್ನು ನೋಡಲಿಲ್ಲವೆಂಬ ಅಪವಾದವನ್ನು ಪರಿಹರಿಸಲಿಕ್ಕೆ ಸಾಹಿತ್ಯಾವಲೋಕನವನ್ನು ಇಲ್ಲಿ ಮಾಡಬೇಕಾಯಿತು. ಸಾಹಿತ್ಯ ರಾಜನ ಅರಮನೆಯಲ್ಲಿಯೆ ನಮಗೊಂದು ಸ್ಥಾನ. ಎತ್ತ ನೋಡಿದರೂ ಪುಸ್ತಕಗಳ ಸೈನ್ಯ. ಒಬ್ಬರ ಬೆನ್ನನ್ನು ಹತ್ತಿ ಮತ್ತೊಬ್ಬರು ಕುಳಿತುಕೊಂಡು ದೀರ್ಘಾಲೋಚನೆಯಲ್ಲಿರುವ ಹಳೆಯ ಬರಹಗಾರರು ಎಲ್ಲಾ ತರದ ಉಡುಪುಗಳನ್ನು ಧರಿಸಿ ಕೆಲವರು 'ಗುಡ್‌ಮಾರ್ನಿಂಗ್' ಎಂದೂ, ಕೆಲವರು 'ನಮಸ್ಕಾರ ಸ್ವಾಮಿ' ಎಂದೂ,. ಕೆಲವರು 'ನಮಸ್ತೇ' ಎಂದು ನಮ್ಮನ್ನು ಸ್ವಾಗತೀಕರಿಸುವವರು. ಈ ಆಂಗ್ಲರೂ ಕನ್ನಡಿಗರೂ ಹಿಂದಿಗಳೂ ನಮ್ಮ ಚಿರಪರಿಚಿತರು.

ನಾವು ಅವರೊಡನೆ ಯಾವಾಗಲೂ ಸಂಭಾಷಣೆಯನ್ನು ಮಾಡುತ್ತೇವೆ. ಬಹು ಉನ್ನತಸ್ಥಾನದಲ್ಲಿ ಕುಳಿತವರ ಕೂಡ ಸಂಭಾಷಣೆಯನ್ನು ಮಾಡುವುದು ಅಷ್ಟು ಸುಲಭವಲ್ಲ. ಹಾಗೆ ಆಸೆಯಾದಾಗ ನಾವು ಸಹ ಏಣಿಯೊಂದನ್ನು ಹತ್ತಿ ಅವರಷ್ಟೆ ಉನ್ನತಿಗೆ ಏರಬೇಕಾಗುತ್ತದೆ. ಇದು ಸ್ವಲ್ಪ ಪ್ರಯಾಸವೇ. ಆದುದರಿಂದ ಈ ಕೆಲಸಕ್ಕೆ ನಾವು ಹೆಚ್ಚು ಸಲ ಕೈಹಾಕುವುದಿಲ್ಲ. ಹಾಕುವ ಅವಶ್ಯಕತೆಯೂ ಇಲ್ಲವೆಂದರೂ ಎನ್ನಬಹುದು.

ಈ ಪುಸ್ತಕಗಳಲ್ಲಿ ಅಧಿಕಾಂಶ ಹಳೆಯ ಪತ್ರಿಕೆಗಳ ವಾರ್ಷಿಕ ಸ್ವರೂಪಿಗಳು, ಎಂದರೆ ಇಡಿಯ ವರ್ಷದ ಪತ್ರಿಕೆಗಳು ಒಟ್ಟುಗೂಡಿ ಒಂದೇ ಕಂಬಳಿಯನ್ನು ಹೊದ್ದುಕೊಂಡು ಸುಖವಾಗಿ ಎತ್ತರವಾದ ಹಾಸಿಗೆಯಲ್ಲಿ ಮಲಗಿಕೊಂಡವರು. ಇವರನ್ನು ಯಾರೂ ಎಬ್ಬಿಸುವುದಿಲ್ಲ. ಇವರ ಕೂಟದಲ್ಲಿ ಮಹಾಕವಿಗಳಾದ ವಾಲ್ಮೀಕಿ, ವ್ಯಾಸಾದಿಗಳೂ ಸೇರುವುದಿದೆ. ಮೊನ್ನೆ ವ್ಯಾಸರ ಮಹಾಭಾರತದ ಸಂದರ್ಶನಕ್ಕಾಗಿ ನಾವು ಹೋದಾಗ ನಮಗೂ ಏಣಿಹತ್ತುವ ಪ್ರಸಂಗವೊದಗಿತು. ವ್ಯಾಸರನ್ನು ಹುಡುಕಿ ಹುಡುಕಿ ಕಡೆಗೆ ಅವರು 'ಜಯಕರ್ಣಾಟಕ'ದ ೧೯೩೦ ನೆಯ ಇಸವಿಯ "ಆನ್ಯುಯಲ್" ಒಡನೆ ಮಿತ್ರತ್ವ ಸಾಧನೆಯಲ್ಲಿರುವುದನ್ನು ಕಂಡು ನಾವು ಬಹು ಸಂತೋಷಪಟ್ಟೆವು. ಆಮೇಲೆ ಅವರ ಮೈತ್ರಿ ವಿಚ್ಛೇದವಾಗದಂತೆ ಇಬ್ಬರನ್ನೂ ಮರ್ಯಾದೆಯಿಂದ ಕೆಳಗಿಳಿಸಿದೆವು.

ಆದರೆ ನಮ್ಮ ದುರದೃಷ್ಟದಿಂದ ನಮಗೆ ಇಡಿಯ ಭಾರತದ ದರ್ಶನವು ಲಭಿಸಲಿಲ್ಲ. ಅದರಲ್ಲಿ ಕೆಲವು ಪರ್ವಗಳು ಸ್ವರ್ಗಾರೋಹಣವನ್ನು ಮಾಡಿದ್ದುವು. ಹೊರಗೆ ರಟ್ಟಿನಲ್ಲಿರುವ ಹೆಸರಿನಲ್ಲಿಯೂ ಸ್ವಲ್ಪ ತಿದ್ದುಪಡಿಯಾಗಿದ್ದಿತು. 'ಮಹಾಭಾರ....' ಎಂಬ ಅಕ್ಷರಗಳುಮಾತ್ರ ಕಾಣಿಸುತ್ತಿದ್ದುವು. 'ತ' ಎಂಬ ಅಕ್ಷರ ತಿಗಣೆಯ ಹೊಟ್ಟೆಗಿಳಿದಿತ್ತು. ಎಂದರೆ ತಿಗಣೆಗಳು ಓದುವ ಕ್ರಮ ಹಿಂದಿನಿಂದ ಮುಂದಕ್ಕೆಂಬುದಕ್ಕೆ ಪ್ರಮಾಣ ನಮಗೆ ದೊರಕಿದಂತಾಯಿತು. ಮತ್ತೆ ಕೆಲವರು ವಾಚಕರು ಸಹ ಪುಸ್ತಕಗಳ ಕಡೆಯ ಪುಟಗಳನ್ನು ಪ್ರಾರಂಭದಲ್ಲಿ ಓದುವ ಕ್ರಮವಿದೆ. ಇದು ತಿಗಣೆಯನ್ನು ಅನುಸರಿಸುವ ಕ್ರಮ; ಅಲ್ಲವಾದರೆ ಹಿಂದಿಯ ಪರಾಕ್ರಮ.

ಮಹಾಭಾರತ ಮಹಾಕಾವ್ಯವಾದರೂ ಅದನ್ನು ಈಗಿನ ವಾಚಕರು ಹೆಚ್ಚಾಗಿ ಓದದಿರಲಿಕ್ಕೆ ಕಾರಣವಾವುದೆಂಬ ಪ್ರಶ್ನೆ ಬೇಗನೆ ಎದ್ದುನಿಂತಿತು. ಬಹುಶಃ ಅವರು ಪುಸ್ತಕವನ್ನು ಎತ್ತುವಾಗಲೂ ಅದರ ಹೆಸರನ್ನು ಓದುವಾಗಲೂ 'ಮಹಾಭಾರ....' ಎಂಬುದನ್ನು ಪ್ರತ್ಯಕ್ಷವಾಗಿ ನೋಡಿ ತಿಳಿದುದರಿಂದ ಅದರ ಗೋಜಿಗೆ ಹೋಗುವುದಿಲ್ಲವೊ ಎಂಬ ಸಂಶಯ ನಮ್ಮಲ್ಲಿ ಹುಟ್ಟಿತು. ಅಥವಾ ಸಂಸ್ಕೃತದಲ್ಲಿ ಸುಲಭವಾಗಿದ್ದರೂ ಕನ್ನಡದಲ್ಲಿ ರೂಪಾಂತರವನ್ನು ಹೊಂದುವಾಗ ಅದು ಮತ್ತಷ್ಟು ಭಾರವಾಗಿ ಜನ್ಮವೆತ್ತಿಬಿಟ್ಟಿತೋ ಎಂಬ ಸಂಶಯವೂ ಹುಟ್ಟಿತು. ಹೇಗಾದರೂ ವಾಚಕರ ಅವಗಾಹನೆಗೆ ಸುಲಭವಾಗುವಂತೆ ಆ ಕಾವ್ಯವನ್ನು ಗದ್ಯರೂಪವಾಗಿ ಅನೇಕ ವಿಭಾಗಗಳಾಗಿ ಮಹನೀಯರು ಬರೆದರು. ಮತ್ತೆ ಚಿಕ್ಕ ಮಕ್ಕಳ ಸಲುವಾಗಿ ಲಘುಭಾರತ, ಬಾಲಭಾರತ, ಇತ್ಯಾದಿ ಸುಲಭ ಗ್ರಂಥಗಳೂ ಹುಟ್ಟಿದುವು. ಆದುದರಿಂದ ಇವುಗಳೆಲ್ಲ ವ್ಯಾಸರ ಮಹಾಭಾರತವೆಂಬ ವೃಕ್ಷರಾಜನಲ್ಲಿ ಹುಟ್ಟಿದ ವಿವಿಧ ರಸಯುಕ್ತವಾದ ಫಲಗಳೆಂದು ನಾವೆಣಿಸಬಹುದಲ್ಲವೆ?

ತಿಳಿಯಬೇಕಾದ ತತ್ತ್ವ ಯಾವುದೆಂದರೆ ನಮ್ಮಲ್ಲಿ ಭಾರವಾದ ಸಾಹಿತ್ಯಕ್ಕೆ ಅವಕಾಶವಿಲ್ಲ, ಎಡೆಯಿಲ್ಲ, ಗಮನವಿಲ್ಲ. ಬಹು ಶ್ರಮಪಟ್ಟು ದೊಡ್ಡ ದೊಡ್ಡ ಗ್ರಂಥರಚನೆಯನ್ನು ಮಾಡಿದರೆ ಅದಕ್ಕೆ ಯೋಗ್ಯ ಮರ್ಯಾದೆ ದೊರಕುವುದಿಲ್ಲ. ನಮಗೆ ರುಚಿಸುವಂತಹ ಸಾಹಿತ್ಯ ಘನರೂಪಿ (Solid) ಯಾಗಿರಕೂಡದು; ದ್ರವರೂಪಿ (Liquid) ಯಾಗಿರಬೇಕು. ಪತ್ರಿಕೆಗಳಲ್ಲಿ ಬರೆಯುವ ಉಪನ್ಯಾಸಗಳು, ಕಥೆಗಳು, ನಾಟಕಗಳು, ಇವನ್ನೆಲ್ಲ ಪರೀಕ್ಷಿಸಿ ನೋಡಿರಿ; ಎಲ್ಲಾ ಸುಲಭವಾಗಿ ಹರಿಯುವಂಥವುಗಳು; ಬೇಗನೆ ಓದುವಂಥವುಗಳು, ವೇಗದಿಂದ ಓದಿ ತೀರಿಸಬಹುದಾಗಿರುವಂಥವುಗಳು; ಸಾಧಾರಣ ಐವತ್ತು ಜನರು ಇವನ್ನು ಓದಿ ತೀರಿಸಿದ ನಂತರ ಆ ಪತ್ರಿಕೆಯೂ ಒಂದು ಬಗೆಯ ಹೊಳೆಯಾಗುವುದು - ಹಿಡಿದಲ್ಲೆಲ್ಲಾ ಹರಿಯುವುದು.

ಮತ್ತಷ್ಟು ರುಚಿಕರವಾದುದು, ಜನಪ್ರಿಯವಾದುದು ಯಾವುದೆಂದರೆ ವಾಯುರೂಪಿ (gaseous) ಯಾದ ಉಪನ್ಯಾಸಗಳು. ಈ ಲೇಖನಗಳಲ್ಲಿ ಭಾರ ಎಳ್ಳಷ್ಟೂ ಇರುವುದಿಲ್ಲ; ಬೇಕಾದಹಾಗೆ ಹರಿಯುತ್ತವೆ, ಓದಿ ತೀರಿಸಿದ ಮೇಲೆ ಮರೆತುಬಿಡಲಿಕ್ಕೆ ಮತ್ತಷ್ಟು ಸುಲಭ. ಅವುಗಳಿಗೆ ಮುಖ್ಯವಾದ ಆಧಾರ ಆಕಾಶ (ಎಂದರೆ ಖಾಲಿ ಸ್ಥಳ). ಆ ಆಕಾಶವನ್ನು ಅವುಗಳು ತುಂಬಿ ಜನ ಮನೋರಂಜನೆಯನ್ನು ಮಾಡಿ ಓದಲಿಕ್ಕೂ ಊಟಮಾಡಲಿಕ್ಕೂ ನಿದ್ರೆಮಾಡಲಿಕ್ಕೂ ಸಮಯ ಸಾಕಷ್ಟು ಇಲ್ಲದ ಈ ಕಾಲದಲ್ಲಿ ಇವುಗಳು ಒಂದು ಅವಶ್ಯವಾದ ಕೆಲಸವನ್ನು ಮಾಡುತ್ತವೆ.

ನಮಗೂ ಇಂತಹ ಬರೆವಣಿಗೆಯಲ್ಲಿ ಪ್ರೀತಿಯಿದೆ. ಜನರೂ ಅವುಗಳನ್ನು ಓದಿ ಆನಂದಿಸುತ್ತಾರೆ. ಆದುದರಿಂದ ಇಂತಹ ಲಘು ಸಾಹಿತ್ಯದಿಂದ ವಿಶೇಷ ಪ್ರಯೋಜನವಿಲ್ಲವೆಂದು ಹೇಳುವವರಿಗೆ ನಾವು ಹೇಳುವುದೇನೆಂದರೆ, ಕಷ್ಟಗಳಿಂದ ತುಂಬಿಹೋದ ಜನಜೀವನದಲ್ಲಿ ಒಂದು ಕಿರುನಗೆಯನ್ನು ಎಬ್ಬಿಸಿ ಕ್ಷಣಮಾತ್ರಕ್ಕಾದರೂ ಸುಖದ ರುಚಿಯನ್ನು ಜನರಿಗೆ ಉಂಟುಮಾಡಿಸುವ ಲಘು ಸಾಹಿತ್ಯ ಅನೇಕ ವೇಳೆ ದೊಡ್ಡ ಭಾರ ಗ್ರಂಥಗಳಿಗಿಂತ ಎಷ್ಟೋ ಮೇಲು.

---

### ಮಹಾರಾಣಿ ಕಾಲೇಜ್ ಸಂಘ

ಬೆಂಗಳೂರು

ಮಹಾರಾಣಿ ಕಾಲೇಜಿನ ಬಡ ವಿದ್ಯಾರ್ಥಿನಿಯರ ಸಹಾಯ ನಿಧಿಗೋಸ್ಕರ ನವೆಂಬರ್ ೨೬ನೇ ತಾ|| ಭಾನುವಾರ ಸಂಜೆ ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಕಾಲೇಜು ಸಂಘವು ವಿವಿಧ ವಿನೋದಾವಳಿಯನ್ನು ಏರ್ಪಡಿಸಿತ್ತು. ಮಂದಿರವು ಮಹಿಳೆಯರಿಂದ ತುಂಬಿದ್ದಿತು. ಕಾರ್ಯಕ್ರಮ ಬಗೆಬಗೆಯ ಅಂಶಗಳಿಂದ ಕೂಡಿತ್ತು. ಪರಿಣಾಮಕಾರಿಯಾದ ದೃಶ್ಯಾವಳಿಗಳು, ಆರ್ಕೆಸ್ಟ್ರ, ವೀಣೆ, ಪಿಟೀಲು, ಕೊಳಲು ಗಾನ, ಇಂಗ್ಲಿಷ್, ಕನ್ನಡ ನಾಟಕಗಳಿಂದ ಆಯ್ದ ಚಿಕ್ಕ ದೃಶ್ಯಗಳು, ನಾಟ್ಯ ಮೊದಲಾಗಿ ನಡೆದವು. ಎಲ್ಲವೂ ವಿಶೇಷ ಜನಪ್ರಿಯವಾಗಿದ್ದವು. ಕಾರ್ಯಕಲಾಪ ಮುಗಿಯುವುದಕ್ಕೆ ಮುಂಚೆ ಕಾಲೇಜಿನ ಪ್ರಿನ್ಸಿಪಾಲರಾದ ಮಿಸ್ ಜೆ. ಮಾರ್ಗರೆಟ್ ಬ್ಲ್ಯಾಕ್‌ರವರು ವಿವಿಧ ವಿನೋದಾವಳಿಯು ಯಶಸ್ವಿಯಾಗಲು ಕಾರಣರಾದವರಿಗೆಲ್ಲ ವಂದನೆಗಳನ್ನು ಅರ್ಪಿಸಿದರು.

**ಮಂಗಳೂರು :**

ಮಂಗಳೂರಿನ ಕಲ್ಚರಲ್ ಅಸೋಸಿಯೇಷನ್, ಪಂಡಿತ ಸಂಘ ಮತ್ತು ಮಿತ್ರ ಮಂಡಲಿಯವರು ನವೆಂಬರು ೧೬ನೇ ಸಾಯಂಕಾಲ ಪಂಪೋತ್ಸವವನ್ನು ಶ್ರೀ|| ಕೆ. ಬಿ. ಜಿನರಾಜ ಹೆಗ್ಗಡೆಯವರ ಅಧ್ಯಕ್ಷತೆಯಲ್ಲಿ ನೆರವೇರಿಸಿದರು. ಇದೇ ಸಂದರ್ಭದಲ್ಲಿ ಮೇಲಿನ ಸಂಸ್ಥೆಯವರು ವಿದ್ವಾನ್ ಮುಳಿಯ ತಿಮ್ಮಪ್ಪಯ್ಯನವರಿಗೆ ಒಂದು ಮಾನಪತ್ರವನ್ನು ಅರ್ಪಿಸಿ ಸಾಹಿತ್ಯಕ್ಷೇತ್ರದಲ್ಲಿ ಶ್ರೀ|| ತಿಮ್ಮಪ್ಪಯ್ಯನವರು ಮಾಡಿದ ಸೇವೆಯನ್ನು ಪ್ರಶಂಸಿಸಿದರು. ಇದೇ ಸಂದರ್ಭದಲ್ಲಿ ವಿದ್ವಾನ್ ತಿಮ್ಮಪ್ಪಯ್ಯನವರ ಕಾವ್ಯವಾಚನವೂ ಶ್ರೀ. ಉಗ್ರಾಣ ಮಂಗೇಶರಾಯರ ಮತ್ತು ಶ್ರೀ|| ಎಚ್. ಭೀಮರಾಯರ ಭಾಷಣಗಳೂ ನಡೆದವು.

---

## ಅಂಟೇ-ಅಂಟದ್ದು

### ಒಂದು ಹರಟೆ

[ವಿದ್ವಾನ್ ಎಂ. ಜಿ. ವೆಂಕಟೇಶಯ್ಯ, ಎಂ.ಎ., ಬಳ್ಳಾರಿ]

ಬಂದೋರು ಬಂದಹಾಗೆ, ಹೋದೋರು ಹೋದಹಾಗೆ–ಅವರ ಮನೆಯ ವಿಚಾರ. ಹೊಸಬರು ಬಂದರೆ ವಿಚಾರಿಸೋದುಂಟು; ಆದರೆ ಅವರ ಮನೆಗೆ ಹಳಬರು ಬರ್ರೋ ಮಾತ್ತೇ ಇಲ್ಲ. ಕುರ್ಚಿಯ ಮೇಲೆ ಕೂತರೆ ತಾನೆ, ಬಂದೋರನ್ನು ಮಾತಾಡಿಸಬಾರದೆಂದೇನಿಲ್ಲದೆ,? ಮನೆ ಎಲ್ಲಾ ಯಜಮಾನಿಯ ವಶವಾದರೆ ಬಂದೋರು ಹೋದೋರನ್ನು ಕಟ್ಟಿಕೊಂಡು ಯಜಮಾನನಿಗೆ ಏನು ಕೆಲಸ ಎಂತಲೋ ಏನೋ! ಹೇಗಾದರೂ ಆಗಲಿ-ಬಂದೋರುಬಂದಹಾಗೆ, ಹೋದೋರು ಹೋದಹಾಗೆ–ಅವರ ಮನೆ ವಿಚಾರ.

ಮಾತಿಗೆ ಒಂದು ಅರ್ಥವಿದೆ ; ಅರ್ಥಕ್ಕೆ ಮತ್ತೊಂದು ಅರ್ಥವಿದೆ. ಪಂಡಿತರ ಭಾಷೆಯಿಂದ ಹೇಳಬೇಕಾದಲ್ಲಿ; ಧ್ವನಿ. ಈ ಧ್ವನಿ ಎಂಬೋ ವಿಚಾರವೇ ಇಲ್ಲ ಅವರ ಹತ್ತಿರ. ನಗಿಸುವಂತಹ ಮಾತೆಂದು ಯಾವುದಾದ್ದರೂ ಎತ್ತಿದರೆ ನಗೆಗೀಡಾಗಬೇಕಾದ್ದೇ. ಎತ್ತದೆ ಕೇವಲ ಸಾಧಾರಣ ಧಾರಿಯಲ್ಲಿದ್ದರೆ 'ಸಪ್ಪೆ!' ಎಂಬೋ ಬಿರುದು ನಿಮಗೆ ಸಿದ್ಧ. ಯಾವುದಕ್ಕೆ ಅಳಬೇಕೋ ಅದಕ್ಕೆ ನಗು; ಯಾವುದಕ್ಕೆ ನಗಬೇಕೋ ಅದಕ್ಕೆ ಅಳು. ಇಷ್ಟು ಅವರ ಪ್ರಕೃತಿ.

ಒಬ್ಬೊಬ್ಬನಿಗೆ ಒಂದೊಂದು ಚಪಲ ಚೆನ್ನಾಗಿ ಅಂಟಿಕೊಂಡಿರುತ್ತೆ, ಇವರಿಗೂ ಒಂದಿತ್ತು ; ಸರಿಬೀಳದಿದ್ದರೆ 'ಇದೇನು, ಯಾರ ತಿಥಿ?' ಎಂದು ಅವರು ಕೇಳುವ ವಾಡಿಕೆ. ಒಂದು ದಿನ-ಆವೊತ್ತು ಸ್ವಲ್ಪ ಮೋಡ ಕವಿದಿತ್ತು—ಅಂಚೆಯವನು ಬಾಗಿಲಿಗೆ ಬಂದ. ಅಷ್ಟರಲ್ಲಿ ಪಕ್ಕದ ಮನೆ ರಾಷ್ಟ್ರಯ್ಯನವರು ಅವನನ್ನು ಪ್ರತಿಭಟಿಸಿ ನಿಂತರು, ತಮಗೆ ಬರಬೇಕಾಗಿದ್ದ 'ಬುಕ್ ಪೋಸ್ಟ್' ಮಾಯವಾಯಿತೆಂದು. ರಾಯರು ಬರದಿರಬೇಕೆಂದರು ; ಅಂಚೆಯವ ಬರಲಿಲ್ಲವೆಂದ. ಪುನಃ ರಾಯರು ಅದೇಮಾತೇ ಹೇಳಿದರು; ಪುನಃ ಅಂಚೆಯವನು ಹಾಗೆ ಅಂದ, ಗದ್ದಲವಾಯಿತು, ರಾಯರು ಒಳಗಿನಿಂದ ಕುರ್ಚಿ ಬಿಟ್ಟೇಳದೆ 'ಏನದು, ಯಾರ ತಿಥಿ?' ಎಂದರು. ಅಂಚೆಯವನು ಒಳಗೆ ಬಂದು 'ನಿಮ್ಮದು' ಎಂದು ಕಾಗದವನ್ನು ಕೈಗೆಕೊಟ್ಟ.

ಇಂತಹ ಕುರ್ಚಿದಾರರಿಗೆ ಬೇಕಾದಷ್ಟು ಹಣವಿರಲೇಬೇಕೆಂದು ಊಹಿಸಬಹುದು, ಊಹಿಸಬಹುದು; ಊಹೆಗೆ ದೇಶವೆ, ಕಾಲವೆ ಯಾವ ಮಿತಿ ಇದೆ! ಈ ಊಹೆಗೆ ಯಾವುದಾದರೂ ಒಂದು ಮಿತಿ ಬೇಕೆಂದರೆ ಬಾಗಿಲೆದುರಿಗಿಟ್ಟಿದ್ದ ಕಬ್ಬಿಣದ ಪೆಟ್ಟಿಗೆಯೆ ಸಾಕು.

ಬಚ್ಚಲಮನೆ ಯಾವಾಗಲೂ ಆಚೆ ಇರಬೇಕೆಂಬುದು ಶಾಸ್ತ್ರೋಕ್ತ. ಹಾಗೇ ಇತ್ತು. ಮನೆಗೆ ಬೇರೆ ಬೀಗ; ಬಚ್ಚಲಮನೆಗೆ ಬೇರೆ ಬೀಗ. ಎರಡು ಬೀಗದ ಕೈಗಳೂ ಒಬ್ಬರಲ್ಲೇ ಇದ್ದರೆ ಗಂಡಹೆಂಡಿರಿಗೆ ಸಮಾನತ್ವ ಹೇಗೆ ತಾನೇ ಬಂದೀತು! ಅದಕ್ಕಾಗಿ ಒಬ್ಬೊಬ್ಬರು ಒಂದೊಂದು ಬೀಗದ ಕೈ ತೆಗೆದುಕೊಂಡರು. ರಾಯರಪಾಲಿಗೆ ಬಚ್ಚಲ ಮನೆಯ ಬೀಗದ ಕೈ ಬಂತು.

ಮನುಷ್ಯನಿಗೆ ಹಣವಿದ್ದೇ ಇರಬೇಕು ಎಂಬೋದೇನೂ ಇಲ್ಲ. ತಮಗೆ ಬೇಕಾದದ್ದು ಹಣದಿಂದ ಬರಬಹುದು ; ಸಾಲದಿಂದ ಬರಬಹುದು. ಸಾಲ ಹುಟ್ಟೋವರೆಗೂ ಹಣದಯೋಚನೆ ಯಾರಿಗೆ ತಾನೆ ಏಕಿರಬೇಕು ? ಈ ವಿಚಾರದಲ್ಲಿ ರಾಯರಿಗೆ ವಿಶೇಷ ತೊಂದರೆ ಇರಲಿಲ್ಲ. ರಾಯರಿಗಾಗಿ ಯಾವ ಸಾಮಾನೂ ಅಂಗಡಿಯಿಂದ ಬರುತ್ತಿರಲಿಲ್ಲ; ಹಾಗೊಂದು ವೇಳೆ ಹೇಳಿಕಳಿಸಿದರೆ ಅಂಗಡಿಯವನು ಯಜಮಾನಿಯನ್ನು ಕೇಳದೆ ಕೊಡುತ್ತಲೂ ಇರಲಿಲ್ಲ. ಚೀಟಿ ಕಳಿಸಿಕೊಟ್ಟರೆ ಸಾಮಾನು ಬಂದೇ ಬರಬೇಕೆಂಬ ಹಟ ನಮ್ಮ ರಾಯರಿಗೆ ಯಾವಾಗಲೂ ಇರಲಿಲ್ಲ. "ಕರ್ಮಣ್ಯೇವಾಧಿಕಾರಸ್ತೇ...." ಇತ್ಯಾದಿ. ಹಟದಿಂದ ಕೌರವ ಕೆಟ್ಟ. ಇಂತಹ ಹಟವನ್ನು ಗೌರವಸ್ಥರಾದ ರಾಯರು ಎಂದಿಗಾದರೂ ಹಿಡಿದಾರೇ!

ಮನೆಯಲ್ಲಿದ್ದೂ ಮನೆಗಂಟಿಕೊಳ್ಳದೆ, ಸಂಸಾರದಲ್ಲಿದ್ದೂ ಸಂಸಾರಕ್ಕಂಟಿಕೊಳ್ಳದೆ ಮಾಡುವಂತಹ ಜೀವನವು ಶ್ರೇಷ್ಠವೆಂದು ಎಷ್ಟು ಜನ ಎಷ್ಟು ಕಡೆ ಹೇಳಿಲ್ಲ ! ಅದನ್ನು ನಡೆನುಡಿಗಳಲ್ಲಿ ಆಚರಣೆಗೆ ತಂದವರು ಅತಿ ವಿರಳ. ಈ ಅತಿ ವಿರಳರಲ್ಲಿ ನಮ್ಮ ರಾಯರೂ ಒಬ್ಬರೆಂದರೆ ಸುಳ್ಳೆ ? ಬಂದೋರು ಬಂದಹಾಗೆ, ಹೋದೋರು ಹೋದ ಹಾಗೆ! ಅದೇ ಜೀವನದ ಮುಖ್ಯ ಜೀವಾಳ.

---

## ಕನ್ನಡ ಸಾಹಿತ್ಯದಲ್ಲಿ ವೀರಶೈವರ ಸ್ಥಾನ

("ಶರಣಸಂದೇಶ"ದಲ್ಲಿ ಶ್ರೀ. ಆರ್. ಸಿ. ಹಿರೇಮಠ ಎಫ್. ವಾಯ್ ಎ. ಕರ್ನಾಟಕ ಕಾಲೇಜ್, ಧಾರವಾಡ. ಅವರು ಬರೆದಿರುವ ಲೇಖನದ ಸಾರಾಂಶ)

ಆಧುನಿಕ ಯುಗದಲ್ಲಿ ಕನ್ನಡ ಸಾಹಿತ್ಯದ ಬೆಳವಣಿಗೆಯು ಭರದಿಂದ ಸಾಗಿಲ್ಲವೇಕೆ? ಕರ್ನಾಟಕದಲ್ಲಿ ಬಹುಜನ ಸಮಾಜವೆಂದರೆ ವೀರಶೈವರದು. ಕನ್ನಡಸಾಹಿತ್ಯ ನಭೋಮಂಡಲದಲ್ಲಿ ಅಸಂಖ್ಯ ವೀರಶೈವ ತಾರೆಗಳು ಮಿನುಗುತ್ತಿವೆ. ವೀರಶೈವರು ಸುಮಾರು ೧೨ನೆಯ ಶತಮಾನದಿಂದ ನಾನೂರು ವರುಷ ಕನ್ನಡಸಾಹಿತ್ಯ ಸಾಮ್ರಾಜ್ಯವನ್ನಾಳಿರುವರು. ಕನ್ನಡಕ್ಕೊಂದು ವೈಶಿಷ್ಟ್ಯವನ್ನು ಕಲ್ಪಿಸಿಕೊಟ್ಟರು ; ಜನಜೀವನಕ್ಕೆ ಅತ್ಯವಶ್ಯವಾದ ಸಾಹಿತ್ಯವನ್ನು ನಿರ್ಮಿಸಿದರು. ಇದೇ ತೆರನಾಗಿ ವೈಷ್ಣವ ಸಾಹಿತಿಗಳೂ ವೀರಶೈವರ ಹೆಗಲಿಗೆ ಹೆಗಲು ಕೊಟ್ಟು ಕನ್ನಡ ಸಾಹಿತ್ಯದಲ್ಲಿ ದುಡಿದರು. ಈ ಪ್ರಕಾರ ಮಧ್ಯ ಯುಗದಲ್ಲಿ ಸರ್ವರೂ ಸಾಹಿತ್ಯವೇಳ್ಗೆಗಾಗಿ ಹೆಣಗಾಡಿದ್ದರಿಂದಲೇ ಕನ್ನಡವು ತುಟ್ಟತುದಿಯನ್ನೇರಿತ್ತು; ಪರರು ಅನುಕರಣಮಾಡಲು ಅರ್ಹವಾದ ಸಾಹಿತ್ಯವಾಗಿತ್ತು. ಇಂದಿನ ಕನ್ನಡ ಸಾಹಿತ್ಯದ ಸ್ಥಿತಿಯು ಕರುಣಾಜನಕವಾಗಿದೆ. ಇದಕ್ಕೆ ಕಾರಣ, ಇಲ್ಲಿನ ಬಹು ಜನರು ಇತ್ತ ಗಮನಕೊಡದಿರುವುದೇ ಎಂದು ನಾನು ಹೇಳಬಯಸುತ್ತೇನೆ. ವೀರಶೈವರು ಇಂದು ಕೈಮುಚ್ಚಿಕೊಂಡು ಸುಮ್ಮನೆ ಕುಳ್ಳಿರುವುದರಿಂದ ಕನ್ನಡ ಸಾಹಿತ್ಯದೇವಿಯು ಅರ್ಧಭಾಗಕ್ಕೆ ಅರ್ಧಾಂಗವಾಯು ಹತ್ತಿದಂತಾಗಿದೆ. ಇಂದಿನ ಕನ್ನಡವು ವಿಶಾಲವಾಗಿ ಹೊಟ್ಟೆಗೆ ಹಿಟ್ಟನ್ನೂ ಮೈಗೆ ಬಟ್ಟೆಯನ್ನೂ ಕೊಡಲಿಕ್ಕೆ ತಕ್ಕ ಸಾಧನವಾಗಬೇಕಾಗಿದೆ. ವೀರಶೈವರು ಏಳದೆ ಎಚ್ಚರಾಗದೆ ದೀನಧ್ವನಿಯಿಂದ ಅಳುತ್ತಿರುವ ಕನ್ನಡ ಕೂಗನ್ನು ಕೇಳದೆ ಕನ್ನಡ ಸಾಹಿತ್ಯದಲ್ಲಿ ಹೊಕ್ಕು ದುಡಿಯದೆ ಕನ್ನಡದ ಬೆಳವಣಿಗೆಯು ಭರದಿಂದ ಸಾಗಲಾರದು. ಆಧುನಿಕ ಯುಗದಲ್ಲಿ ಯುಗಕ್ಕೆ ತಕ್ಕಂತೆ ಬರೆಯಬೇಕು. ವಿಶ್ವಜ್ಞಾನ ಮಾಡಿಕೊಳ್ಳಲು ಸಹಾಯವಾಗುವ ಸಾಹಿತ್ಯವನ್ನು ನಿರ್ಮಿಸಬೇಕು. ವಿಶ್ವವೇ ಸ್ವೀಕರಿಸಬಹುದಾದ ಸಾಹಿತ್ಯ ಬರೆಯಬೇಕು. ಸಾಹಿತ್ಯವು ಸಮಾಜ ತಿದ್ದುವ ಬಲವಾದ ಸಾಧನವಾಗಬಲ್ಲದು. ಕರ್ನಾಟಕದ ವೀರಶೈವರಿಗೆ ಅಷ್ಟೊಂದು ಅನ್ಯಭಾಷೆಯ ಸೋಂಕು ಇಲ್ಲ. ಕನ್ನಡವು ಅವರಿಗೆ ಗತಿ; ಕನ್ನಡಕ್ಕೆ ಅವರು ಗತಿ. ಅದಕ್ಕಾಗಿಯೇ ಅವರು ಮುಂದೆ ಬಂದರೆ ಕನ್ನಡದ ಏಳ್ಗೆಯು ತಮ್ಮ ಏಳ್ಗೆಯ ಕೂಡಿಯೇ ಆಗುವದು. ಆತ್ಮೋದ್ಧಾರಕ್ಕಾಗಿಯಾದರು ಅಪಾರ ಕನ್ನಡಸೇವೆಯನ್ನು ಮಾಡಿದ ತಮ್ಮ ಪೂರ್ವಜರನ್ನು ನೆನೆದಾದರೂ ಇಂದಿನ ವೀರಶೈವರು ಕನ್ನಡಕ್ಕಾಗಿ ಟೊಂಕ ಕಟ್ಟಿ ಹೆಣಗಾಡಬೇಕು. ಎರಡು ಶತಮಾನಗಳವರೆಗೆ ನಿಂತಲ್ಲಿಯೇ ನಿಂತುಬಿಟ್ಟಿದ್ದ ಕನ್ನಡನಾಡು ಎಚ್ಚತ್ತಿರುವುದು ಇಪ್ಪತ್ತನೆಯ ಶತಮಾನದ ಆದಿಯಲ್ಲಿ. ವೀರಶೈವರಲ್ಲಿಯೂ ಕನ್ನಡದ ನುಡಿಗಳು ಒಡೆದು ಕಾಣಹತ್ತಿರುತ್ತವೆ. ಇನ್ನು ಮುಂದೆ ಹೆಚ್ಚು ಹುರುಪಿನಿಂದ ಕಾರ್ಯಸಾಗಿಸಬೇಕು. ಆಧುನಿಕ ಸಾಹಿತ್ಯದ ವಿಷಯದಲ್ಲಿ ವೀರಶೈವರ ಹೆಸರು ಮಾಯವಾಗಿರುವುದನ್ನು ತಜ್ಞರು ತೀವ್ರವೇ ಹೊಡೆದೋಡಿಸಬೇಕು.

---




# ಐದನೆಯ ವಿಶೇಷ ಸಾಹಿತ್ಯೋತ್ಸವ ೧೯೩೯

## ವರುಮಾನ-ವೆಚ್ಚ

| ವರುಮಾನ | ರೂ. | ಅ. | ಪೈ. |
|---|---|---|---|
| ೧. ಸಹಾಯ ದ್ರವ್ಯಗಳು | ೬೧೭ | ೦ | ೦ |
| ೨. ಪರಿಷತ್ತಿನಿಂದ ಮುಂಗಡ | ೨೦ | ೦ | ೦ |
| ೩. ಟಿಕೆಟ್ಟುಗಳ ಮಾರಾಟ | ೪೦ | ೦ | ೦ |
| ೪. ಗೋಕರ್ಣ ಉತ್ಸವ ಸಮಿತಿಯ ಸ್ವಾಗತಾಧ್ಯಕ್ಷರಿಂದ | ೫೩ | ೧೫ | ೦ |
| ೫. ಮುಂಗಡ ಹಿಂದಿರುಗಿದ್ದು | ೧೦ | ೧೦ | ೦ |
| ೬. ಇತರ ಬಾಬುಗಳು | ೧೩ | ೨ | ೦ |
| ನಿವ್ವಳ ವರುಮಾನ | ೭೫೪ | ೧೧ | ೦ |
| ಬ್ಯಾಂಕಿನ ಚಾಲ್ತಿ ಲೆಕ್ಕದಿಂದ ತೆಗೆದ ಹಣ | ೪೮೬ | ೮ | ೦ |
| ಒಟ್ಟು | ೧,೨೪೧ | ೩ | ೦ |

| ವೆಚ್ಚ | ರೂ. | ಅ. | ಪೈ. |
|---|---|---|---|
| ೧. ಸಿಬ್ಬಂದಿ | ೨೪ | ೦ | ೦ |
| ೨. ಅಂಚೆ ಮತ್ತು ತಂತಿ ವೆಚ್ಚ | ೫೮ | ೯ | ೦ |
| ೩. ಬರವಣಿಗೆ ಸಾಮುಗ್ರಿ, ಮುದ್ರಣ | ೪೨ | ೬ | ೦ |
| ೪. ಉಪಾಹಾರ | ೧೨೧ | ೧ | ೧೧ |
| ೫. ಪ್ರಯಾಣ ವೆಚ್ಚ | ೨೯ | ೨ | ೬ |
| ೬. ನಾಟಕ, ವಿನೋದ ಪ್ರದರ್ಶನಗಳು | ೩೯ | ೦ | ೦ |
| ೭. ಹೂ, ಮುಂತಾದ್ದು | ೩೬ | ೦ | ೦ |
| ೮. ಪಾತ್ರೆ, ಸಲಕರಣೆ | ೩೮ | ೧೪ | ೦ |
| ೯. ಪುಸ್ತಕ ಪ್ರದರ್ಶನ | ೯ | ೯ | ೩ |
| ೧೦. ಆಮಾನತ್ತು | ೧೨ | ೧೦ | ೦ |
| ೧೧. ಕೊಳ್ಳೇಗಾಲ ಉತ್ಸವಕ್ಕೆ | ೭೪ | ೧೪ | ೬ |
| ೧೨. ಉಡುಪಿ, ಬಾರಕೂರು, ಗೋಕರ್ಣ ಉತ್ಸವಗಳಿಗೆ | ೧೨೪ | ೮ | ೩ |
| ೧೩. ಮುಂಗಡ | ೧೦ | ೦ | ೦ |
| ೧೪. ಪರಿಷತ್ತಿನ ಮುಂಗಡ ಹಿಂದಕ್ಕೆ ಕೊಟ್ಟದ್ದು | ೨೦ | ೦ | ೦ |
| ೧೫. ಇತರ ಬಾಬುಗಳು | ೪೯ | ೫ | ೧೦ |
| ನಿವ್ವಳ ವ್ಯಯ | ೬೯೦ | ೧ | ೩ |
| ಬ್ಯಾಂಕಿನ ಚಾಲ್ತಿ ಲೆಕ್ಕಕ್ಕೆ ಹಾಕಿದ ಹಣ | ೪೮೬ | ೮ | ೦ |
| „ „ ಲೆಕ್ಕದಲ್ಲಿ ಉಳಿದಿರುವ ಹಣ | ೬೪ | ೯ | ೯ |
| ಒಟ್ಟು | ೧,೨೪೧ | ೩ | ೦ |

Checked and found Correct
ಕೆ. ಎಸ್. ನಾರಾಯಣರಾವ್
ಶೋಧಕರು. ೨೬—೧೧—೩೯.

ಕೆ. ಸಂಪದ್ಗಿರಿರಾವ್
ವಿ. ಸೀತಾರಾಮಯ್ಯ
೨೨—೧೧—೩೯ ಉತ್ಸವ ಸಮಿತಿಗಾಗಿ.

## ಕನ್ನಡ ಸುದ್ದಿ

**ಶಿವಮೊಗ್ಗ :**

ಇಲ್ಲಿಯ ಕರ್ನಾಟಕ ಸಂಘದ ಸಾರ್ವಜನಿಕ ಸಭೆಯು ಈ ತಿಂಗಳು ೩ನೇ ತಾರೀಖು ಸೇರಲು ಏರ್ಪಡಿಸಿದೆ.

**ಗುಡಿಬಂಡೆ :**

ನವೆಂಬರು ೨೦ನೆಯ ಸೋಮವಾರ ಟ್ರಾವಲರ್ಸ್‌ಬಂಗಲೆಯಲ್ಲಿ ಕರ್ನಾಟಕ ಸಂಘದ ಆಶ್ರಯದಲ್ಲಿ ಒಂದು ಸಭೆ ಸೇರಿತ್ತು. ಅಮಲ್ದಾರ್ ಶ್ರೀ. ವಿ. ಹನುಮಂತಪ್ಪನವರು ಅಧ್ಯಕ್ಷತೆ ವಹಿಸಿದ್ದರು. ಕೋಲಾರದ ಕರ್ನಾಟಕ ಸಂಘದ ಗೌ॥ ಕಾರ್ಯದರ್ಶಿಗಳಾದ ಶ್ರೀ. ಎಂ. ವೆಂಕಟಕೃಷ್ಣಪ್ಪನವರು 'ಕರ್ನಾಟಕ ಏಕೀಕರಣ' ಎಂಬ ವಿಚಾರವಾಗಿ ಕೊಂಚಕಾಲ ಮಾತನಾಡಿ, ಕಾವ್ಯಪ್ರಪಂಚದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ವಿವರಿಸಿ "ನಾಗರಿಕ" 'ಎಂದ್ಕುದ್ಕೆ ರತ್ನ' ಮತ್ತು ಹಳ್ಳಿಯ ಹಾಡುಗಳಿಂದ ಕೆಲವು ಭಾಗಗಳನ್ನು ಓದಿದರು.

ತರುವಾಯ ಅಧ್ಯಕ್ಷರು ಹೃದಯಂಗಮವಾಗಿ ಭಾಷಣ ಮಾಡಿ ಸಂಘವು ಯಶಸ್ವಿಯಾಗಿ ಕೆಲಸ ಮಾಡಲು ಪುಸ್ತಕ ಭಂಡಾರವು ಅವಶ್ಯಕವೆಂದೂ, ಧನಿಕರು ಹೊಸ ದೇವಾಲಯಗಳನ್ನು ಕಟ್ಟಿಸುವ ಬದಲು ಪುಸ್ತಕ ಭಂಡಾರಗಳ ಮೂಲಕವೂ ದರಿದ್ರ ನಾರಾಯಣನ ಸೇವೆಯ ಮೂಲಕವೂ ಸಾರ್ಥಕಗೊಳಿಸಿಕೊಳ್ಳಬಹುದೆಂದು ಹೇಳಿದರು.

ಜಿ. ಎಸ್. ರಾಯಪ್ಪನವರು ಸಂಘಕ್ಕೆ ಅಧ್ಯಕ್ಷರು ಕೊಡುತ್ತಿರುವ ಉತ್ತೇಜನಕ್ಕಾಗಿ ಕೃತಜ್ಞತೆಯನ್ನು ಸೂಚಿಸಿದರು.

**ಧಾರವಾಡ :**

ಕ. ವಿ. ವ. ಸಂಘದ ಸುವರ್ಣ ಮಹೋತ್ಸವವನ್ನು ಎಲ್ಲ ವಿಧದಲ್ಲಿ ಶ್ರೇಯಸ್ಕರವಾಗಿ ನೆರಗಿಸುವುದಕ್ಕೆ ತಾ॥ ೧೦—೯—೧೯೩೯ನೇ ದಿವಸ ಕೂಡಿದ ಸಾಧಾರಣ ಸಭೆಯಲ್ಲಿ ಸಂಘದ ಕಾರ್ಯಕಾರೀ ಮಂಡಲಕ್ಕೆ ಸರ್ವಾಧಿಕಾರವನ್ನು ಕೊಟ್ಟ ಮೇರೆಗೆ ೧೯೪೦ನೇ ಇಸ್ವಿಯ ಡಿಸೆಂಬರ ತಿಂಗಳಲ್ಲಿ ಸುವರ್ಣ ಮಹೋತ್ಸವವನ್ನು ಜರುಗಿಸಬೇಕೆಂತಲೂ ಅದೇ ಕಾಲಕ್ಕೆ ಕನ್ನಡ ಸಾಹಿತ್ಯ ಸಮ್ಮೇಲನದ ೨೫ನೆಯ ಅಧಿವೇಶನವನ್ನು ಧಾರವಾಡದಲ್ಲಿಯೇ ಕೂಡಿಸಬೇಕೆಂದೂ ಕಾರ್ಯಕಾರೀ ಮಂಡಲದವರು ನಿಶ್ಚಯಿಸಿರುತ್ತಾರೆ. ಈ ವಿಷಯವನ್ನು ಕುರಿತು ಹೆಚ್ಚಾಗಿ ವಿಚಾರ ವಿನಿಮಯ ಮಾಡಿ ಮುಂದಿನ ಕಾರ್ಯಕ್ಕೆ ಪ್ರವರ್ತರಾಗಲು ಕಾರ್ಯಕಾರೀ ಮಂಡಲದವರು ಈ ಸಂಬಂಧದಲ್ಲಿ ವಿಶೇಷ ಆಸ್ಥೆಯುಳ್ಳವರ ಸಲಹೆ ಸಹಕಾರಗಳನ್ನು ಅಪೇಕ್ಷಿಸಿ ಇಂಥವರೆಲ್ಲರ ಸಭೆಯನ್ನು ರವಿವಾರ ತಾ॥ ೩—೧೨—೩೯ನೇ ದಿವಸ ಸಾಯಂಕಾಲ ೫॥ ಘಂಟೆಗೆ ಕರ್ನಾಟಕ ವಿದ್ಯಾವರ್ಧಕ ಸಂಘದ ಶ್ರೀ ಚಾಮರಾಜ ಮಂದಿರದಲ್ಲಿ ಕೂಡಿಸುವುದನ್ನು ನಿಶ್ಚಯಿಸಿದ್ದಾರೆ.

## ಬೇಕಾಗಿದೆ

ಪರಿಷತ್ತಿನ ಕಚೇರಿಗೆ ಸಹಾಯಕ ಕಾರ್ಯದರ್ಶಿಯವರು ಬೇಕಾಗಿದೆ. ಕಚೇರಿಯ ಒಳ ವ್ಯವಸ್ಥೆ, ಪತ್ರಿಕೆಗಳ ಕೆಲಸ ಮತ್ತು ಅಚ್ಚುಕೂಟದ (ಪ್ರೆಸ್) ಆಡಳಿತ ಇವುಗಳನ್ನು ನೋಡಿಕೊಳ್ಳುವಂಥವರಾಗಬೇಕು.

ಸಂಬಳ ತಿಂಗಳೊಂದಕ್ಕೆ ೫೦ ರೂ. ಅಥವಾ ಅಷ್ಟರೊಳಗೆ—ಯೋಗ್ಯತೆ ಅನುಭವಗಳಿಗೆ ತಕ್ಕಂತೆ.

ಅಪೇಕ್ಷಾ ಪತ್ರಗಳಲ್ಲಿ ಹೆಸರು, ವಯಸ್ಸು, ಅನುಭವ, ವಿದ್ಯಾ ವಿವರಗಳು ಮುಂತಾದುವನ್ನು ಕಾಣಿಸಿ ಕೆಳಗಿನ ವಿಳಾಸಕ್ಕೆ ಡಿಸೆಂಬರ್ ೫ನೇ ತಾರೀಖಿನೊಳಗಾಗಿ ಬರೆದುಕೊಳ್ಳಬೇಕು.

ಸಿ. ಕೆ. ವೆಂಕಟರಾಮಯ್ಯ,
ಗೌ॥ ಕಾರ್ಯದರ್ಶಿ
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

**ಈ ಪತ್ರಿಕೆಯು ಭದ್ರಾವತಿಯಲ್ಲಿ ಮೈಸೂರು ಪೇಪರ್ ಮಿಲ್ಸ್‌ನಲ್ಲಿ ತಯಾರಾದ ಕಾಗದದಲ್ಲೇ ಅಚ್ಚಾಗುತ್ತಿದೆ.**

ಮುದ್ರಣಕಾರರು : ಬಿ. ರಂಗನಾಥರಾವ್, ಮ್ಯಾನೇಜರ್, ಸುಬೋಧ ವಿದ್ಯುನ್ಮುದ್ರಣಾಲಯ, ಬೆಂಗಳೂರು.
ಪ್ರಕಟನಕಾರರು : ಬಿ. ವೆಂಕೋಬರಾವ್, ಬಿ. ಎ., ಸಂಪಾದಕ, ಕನ್ನಡ ಸಾಹಿತ್ಯ ಪರಿಷತ್ತಿನ ಪರವಾಗಿ